# ಗುಜರಾತ್ ನಲ್ಲಿ ಕೃಷಿ ಬದಲಾವಣೆ ಮತ್ತು ವರ್ಗ ಸಂಘರ್ಷ

**- ಯಾನ್ ಬ್ರೆಮನ್**

ಕೇವಲ ಕೆಲವು ದಶಕಗಳ ಹಿಂದೆ ಗ್ರಾಮೀಣ ಭಾರತವನ್ನು ಸಂಪ್ರದಾಯದಲ್ಲಿ ಬಂದಿಯಾಗಿರುವ ಬಡತನ ಮತ್ತು ಜಡತೆಯ ಸಮಾಜ ಎಂದು ವಿವರಿಸಲಾಗುತ್ತಿತ್ತು. ಗನ್ನರ್ ಮಿರ್ಡಾಲ್ (Gunnar Myrdal) ಅವರ 1968ರಲ್ಲಿ ಪ್ರಕಟವಾದ ಪರಿಚಿತ ಅಧ್ಯಯನವು ಈ ಚಿಂತನಾ ವಿಧಾನದ ಪ್ರಮುಖ ಚಿತ್ರಣವನ್ನು ಕೊಟ್ಟಿದ್ದು, ಅದು ಸುಮಾರು 20ನೇ ಶತಮಾನದ ಮಧ್ಯಭಾಗದಲ್ಲಿ ಅಭಿವೃದ್ಧಿ ಕುರಿತ ಪಾಶ್ಚಿಮಾತ್ಯ ಸಂವಾದದಲ್ಲಿ ಮೇಲುಗೈ ಸಾಧಿಸಿತ್ತು. ಅವರ *Asian Drama* (ಏಷಿಯನ್ ಡ್ರಾಮಾ) ಹೊತ್ತಿಗೆಯು ವಿಶಾಲವಾದ ಹಿನ್ನೆಲೆಯನ್ನು ಹೊಂದಿದ್ದು, ಲೇಖಕ ತನ್ನ ವಾದಕ್ಕೆ ಜನಭರಿತ ಖಂಡದ ದಕ್ಷಿಣ ಭಾಗವನ್ನು ಪ್ರಮುಖವಾಗಿ ಆಧರಿಸಿದ್ದು, ಇನ್ನೂ ನಿಖರವಾಗಿ, ಹಿಂದಿನ ಬ್ರಿಟಿಷ್ ಭಾರತದ ಗುಣವೈಶಿಷ್ಟ್ಯವಾದ ಸ್ವಯಂಪ್ರೇರಿತವಾಗಿ ಪರಿವರ್ತನೆ ಆಗಲು ಸಾಮರ್ಥ್ಯವಿರದಿರುವುದರ ಮೇಲೆ ಆಧರಿಸಿದ್ದರು. ಸಾವಿನ ಪ್ರಮಾಣದ ಕುಸಿತ ಮತ್ತು ಜನನ ಪ್ರಮಾಣದ ನಿರಂತರವಾದ ಹೆಚ್ಚಳದಿಂದಾದ ಜನಸಂಖ್ಯೆಯ ಬೆಳವಣಿಗೆಯಿಂದ ಅಭಿವೃದ್ಧಿಯ ಪ್ರಯತ್ನಗಳು ವ್ಯರ್ಥವಾಗುತ್ತಿರುವುದನ್ನು ಮಿರ್ಡಾಲ್ ಆತಂಕದಿಂದಲೇ ಗಮನಿಸಿದ್ದರು. ಅವರ ಅಭಿಪ್ರಾಯದಂತೆ, ಕೃಷಿ ಉತ್ಪಾದನೆಯ ಹೆಚ್ಚಳಕ್ಕೆ ತಡೆಯೊಡ್ಡುತ್ತಿರುವ ಕಾರ್ಮಿಕ ಬಲದ ಅಸಮರ್ಪಕ ಬಳಕೆಯನ್ನು ನಿವಾರಿಸಲು ಪ್ರಮುಖ ಸಾಂಸ್ಥಿಕ ಸುಧಾರಣೆಗಳ ತುರ್ತು ಅಗತ್ಯವಿತ್ತು. ಅವರ ಮನಸ್ಸಿನಲ್ಲಿ ಇದ್ದುದೇನೆಂದರೆ, ಕೃಷಿ ಸಂಪನ್ಮೂಲಗಳ ಆಮೂಲಾಗ್ರ ಮರುಹಂಚಿಕೆಯ ಮೂಲಕ ಉಳುವವರ ಕೈಗೆ ಭೂಮಿಯನ್ನು ನೀಡುವದಾಗಿತ್ತು. ಇಂಥ ಮೂಲಭೂತ ಸುಧಾರಣೆಯ ದ್ವಿಮುಖ ಉದ್ದೇಶವೇನೆಂದರೆ, ಸಾಮಾಜಿಕ ರಚನೆಯಲ್ಲಿ ಕಠಿಣ ಅಸಮಾನತೆಯನ್ನು ಕಡಮೆಗೊಳಿಸುವ ರಾಜಕೀಯ ಕಾರಣ; ಎರಡನೆಯದು ಆರ್ಥಿಕ ಉದ್ದೇಶದ್ದು, ಅಂದರೆ, ಅತಿ ಹೆಚ್ಚು ಮಂದಿ ಮಾಲೀಕರು ತಮಗೆ ನೀಡಲಾದ ಭೂಮಿಯನ್ನು ಗರಿಷ್ಠ ಪ್ರಮಾಣದಲ್ಲಿ ಬಳಸಿಕೊಳ್ಳುವುದು. ಆದರೆ, ರಾಜಕಾರಣ ಮತ್ತು ಕಾರ್ಯನೀತಿಗಳ ಸಮೀಪದ ಮತ್ತು ಹೆಚ್ಚು ವಾಸ್ತವಿಕ ಮೌಲ್ಯಮಾಪನದಿಂದ ಗ್ರಾಮೀಣ ವ್ಯವಸ್ಥೆಯನ್ನು ಈ ರೀತಿ ಪರಿವರ್ತಿಸಲು ಅಗತ್ಯವಾದ ಸಾಮರ್ಥ್ಯ ಮತ್ತು ಮನಃಸ್ಥಿತಿ ಎರಡೂ ಇಲ್ಲ ಎನ್ನುವುದು ಮಿರ್ಡಾಲ್ಗೆ ಖಾತ್ರಿಯಾಯಿತು. ಅವರ ಅಭಿಪ್ರಾಯದಲ್ಲಿ, ಸಾಂಪ್ರದಾಯಿಕ ಆಸ್ತಿ ಸಂಬAಧಗಳಲ್ಲಿ ಯಾವುದೇ ಮೂಲಭೂತ ಬದಲಾವಣೆಯನ್ನು ತರುವುದರಲ್ಲಿ ವೈಫಲ್ಯ ಮತ್ತು "ಅಭಿವೃದ್ಧಿಪೂರಕ" ವಲ್ಲದವರು ಎಂದುಕೊಳ್ಳಲಾದ ಕೃಷಿಕರ ಸ್ವಭಾವ ಸಿದ್ದ ಮನಃಸ್ಥಿತಿಯನ್ನು ಬದಲಿಸಲು ಸಾಧ್ಯವಾಗದೆ ಇರುವುದಕ್ಕೆ ಏಷ್ಯಾಟಿಕ್ ಪ್ರಭುತ್ವದ "ಮೃದು" ಸ್ವಭಾವ ಕಾರಣವಾಗಿತ್ತು.

ಅದೇನೇ ಇದ್ದರೂ, ಸಾಮಾಜಿಕ ಪ್ರೇರಕಶಕ್ತಿಯ ಸಂಪೂರ್ಣ ಕೊರತೆ ಇರಲಿಲ್ಲ ಎನ್ನುವುದಕ್ಕೆ ಸಾಕ್ಷಿಯಾಗಿ ಹಿಡುವಳಿಯು ಗ್ರಾಮೀಣ ಪ್ರದೇಶದ ಕೆಲ ಸಣ್ಣ ಪ್ರಮಾಣದ ಶ್ರೀಮಂತ ವರ್ಗದವರಲ್ಲಿ ಕೇಂದ್ರೀಕೃತವಾಗಿತ್ತು. ಇವರಲ್ಲಿ ಹೆಚ್ಚಿನವರು ಇತ್ತೀಚೆಗೆ ರಾಜಕೀಯ ಪ್ರಾಮುಖ್ಯ ಗಳಿಸಿದ್ದ ಮೇಲ್ಮುಖ ಚಲನಶೀಲ ಕೃಷಿಕ ಜಾತಿಗಳಿಗೆ ಸೇರಿದವರಾಗಿದ್ದರು. ಈ ವರ್ಗದ ಪ್ರಾಬಲ್ಯದ ಹೆಚ್ಚಳ ಮತ್ತು ಇದರೊಟ್ಟಿಗೆ ಪಾಲುಗುತ್ತಿಗೆದಾರರ ಹಾಗೂ ಅನುಷಂಗಿಕವಾಗಿ ಕೃಷಿ ಕಾರ್ಮಿಕರ ಸ್ಥಾನಮಾನ ಕುಸಿತವಾಗುತ್ತಿರುವುದರ ಅರಿವು ಮಿರ್ದಾಲ್‌ಗೆ ಇತ್ತು. ಸಾಮಾಜಿಕ ಸಮತೋಲನ ಅಪಾರ ಸಂಖ್ಯೆಯ ಸಣ್ಣ ಉತ್ಪಾದಕರ ಕಡೆಗೆ ವಾಲುವ ಸಾಧ್ಯತೆಗಳ ಬಗ್ಗೆ ಸಂದೇಹವಿದ್ದುದರಿಂದ, ಆರ್ಥಿಕ ಬೆಳವಣಿಗೆಯ ಪ್ರಕ್ರಿಯೆಗೆ ಸಣ್ಣ ಪ್ರಮಾಣದಲ್ಲಿರುವ ಶ್ರೀಮಂತ ಭೂಮಾಲೀಕ ವರ್ಗದವರು ಮುಂದಾಳತ್ವವನ್ನು ತೆಗೆದುಕೊಳ್ಳಲು ಅನುವು ಮಾಡಿಕೊಡಬಲ್ಲ ಮತ್ತು ಸಾಮಾಜಿಕ ಬುನಾದಿ ಆಗುವ ಕೃಷಿ ಕಾರ್ಯ ತಂತ್ರವೊಂದನ್ನು ಮಿರ್ದಾಲ್ ಪ್ರತಿಪಾದಿಸಿದರು.

ಅವರು ವಿಸ್ತೃತವಾಗಿ ಇಲ್ಲವೇ ಸಮರ್ಪಕವಾಗಿ ವಾದ ಮಂಡಿಸದಿದ್ದರೂ, ಈ ಕಾರ್ಯನೀತಿ ಶಿಫಾರಸು ಅವರ ವಿಶ್ಲೇಷಣೆಯಲ್ಲಿ ಪ್ರಮುಖ ನಿರ್ಣಾಯಕ ಘಟ್ಟವಾಯಿತು. ಈಗಾಗಲೇ ಅಧಿಕಾರಶಾಹಿ ಕಾರ್ಯಭಾರಗಳು ಬಂಡವಾಳಶಾಹಿ ಮಾಲೀಕರ ಪರವಾಗಿ ತೋರಿಸಿದ ಅದೃಶ್ಯ ಪಕ್ಷಪಾತವನ್ನು ಬಲಾಢ್ಯ ರೈತರ ಹಿತಾಸಕ್ತಿಯನ್ನು ಉದ್ದೇಶಪೂರ್ವಕವಾಗಿ ಮತ್ತು ವ್ಯವಸ್ಥಿತವಾಗಿ ಉತ್ತೇಜಿಸುವ ಸಲುವಾಗಿ ಹಾಗೂ ಅವರ ಪರವಾಗಿ ಬದಲಿಸಬೇಕಾಗುವ ಅಗತ್ಯವಿತ್ತು. ಏಕೆಂದರೆ, ಆ ಮೂಲಕ ಅವರು ಹೊಂದಿದ್ದ ಆಧುನೀಕರಣದ ನಿಜವಾದ ಗ್ರಾಮೀಣ ವಾಣಿಜ್ಯೋದ್ಯಮಿಗಳಾಗುವ ಸಾಮರ್ಥ್ಯವನ್ನು ವಾಸ್ತವಗೊಳಿಸಬಹುದಾಗಿತ್ತು. ಈ ಪರಿಸ್ಥಿತಿಯ ಅನಿವಾರ್ಯ ಪರಿಣಾಮವಾದ ಹೆಚ್ಚುತ್ತಿದ್ದ ಸಾಮಾಜಿಕ ವಿಭೇದೀಕರಣಕ್ಕೆ ಭೂಮಿಯಲ್ಲಿ ಕೆಲಸ ಮಾಡುವ ಕಾರ್ಮಿಕ ಪಡೆಗೆ ರಕ್ಷಣೆ ಹಾಗೂ ಭದ್ರತೆ ನೀಡುವ ಮೂಲಕ ಪರಿಹಾರ ಒದಗಿಸಬೇಕಿತ್ತು. "ಜನಹಿತ ಬಂಡವಾಳಶಾಹಿ" ಎನ್ನುವ ಆಕರ್ಷಕ ಶೀರ್ಷಿಕೆ ಬಳಸಿದ ಮಿರ್ದಾಲ್, ಅಧಿಕಾರಿಗಳು "ಜಮೀನುರಹಿತ ಕೆಳಹಂತದವರಿಗೆ ತುಣುಕು ಭೂಮಿ ನೀಡುವ ಮೂಲಕ ಅವರಿಗೆ ಘನತೆ ಹಾಗೂ ಹೊಸ ಜೀವನದೃಷ್ಟಿ ನೀಡುವುದಲ್ಲದೆ, ಸ್ವತಂತ್ರ ಆದಾಯ ಮೂಲವೊಂದನ್ನು ಕೊಡಮಾಡಬೇಕು" (ಸಂಪುಟ.II, 1968:1382) ಎಂದು ಸಲಹೆ ನೀಡಿದ್ದರು. ಭಾರತದ ಅಭಿವೃದ್ಧಿಗೆ ಹೆಚ್ಚು ಆಮೂಲಾಗ್ರ ಪಥವೊಂದು ಅಸಾಧ್ಯವಾಗಿರುವುದರಿಂದ, ಬಂಡವಾಳಶಾಹಿ ವಿಧಾನಗಳನ್ನು ಬಳಸಿಕೊಂಡೇ ಸಾಮಾಜಿಕ ಅಸಮಾನತೆಯನ್ನು ಕಡಮೆ ಮಾಡಬೇಕು ಇಲ್ಲವೇ ಕನಿಷ್ಠ ಹತ್ತಿಕ್ಕಬೇಕು ಎನ್ನುವುದು ಈ ಸ್ವೀಡಿಷ್ ಅರ್ಥಶಾಸ್ತ್ರಜ್ಞನ ಇಂಗಿತ ಸೂಚಿಯಾಗಿತ್ತು. ಸಣ್ಣ ಜಮೀನು ಇದ್ದವರೆಲ್ಲರಿಗೂ ಉತ್ತಮ ಜೀವನ ಕೈ ನಿಲುಕಿನಲ್ಲಿದೆ ಎನ್ನುವ ಭರವಸೆಯನ್ನು ಒಡ್ಡುವ ಮೂಲಕ ಗ್ರಾಮೀಣ ಜನಸಂಖ್ಯೆಯಲ್ಲಿ ಬಹುಸಂಖ್ಯಾತರಾದ ಈ ಕೆಳ ಹಂತದ ಜನರು ತಮ್ಮ ಜನಸಂಖ್ಯಾ ವರ್ತನೆ ಮೇಲೆ ಸ್ವಯಂ ನಿಯಂತ್ರಣ ಸಾಧಿಸುವ ಅಗತ್ಯವನ್ನು ಅರ್ಥ ಮಾಡಿಕೊಳ್ಳುತ್ತಾರೆ ಹಾಗೂ ತಮ್ಮ ಹಿತಕ್ಕಾಗಿ ಜನನ ನಿಯಂತ್ರಣ ಕೈಗೊಳ್ಳುತ್ತಾರೆ ಎಂದವರು ಅಪರೋಕ್ಷವಾಗಿ ವಾದ ಮಂಡಿಸಿದರು.

ಅನಂತರದ ಘಟನಾವಳಿಗಳು ಮಿರ್ದಾಲ್ ಅವರ ಅಭಿಪ್ರಾಯಗಳನ್ನು ಸಮರ್ಥಿಸಿದವು. ಅವರು ಪ್ರೋತ್ಸಾಹಿಸಿದ ಮಾರ್ಗವನ್ನು 1970 ಹಾಗೂ 1980ರ ದಶಕಗಳಲ್ಲಿ ಭಾರತದ ಕಾರ್ಯನೀತಿ ನಿರೂಪಕರು ಅವರು ಅಂದುಕೊAಡಿದ್ದಕ್ಕಿAತ ಹೆಚ್ಚು ಸಕ್ರಿಯವಾಗಿ ಉತ್ತೇಜಿಸಿದರು (Chakravarthy (ಚಕ್ರವರ್ತಿ), 1987:24). ಕೃಷಿ ಉತ್ಪಾದನೆಯಲ್ಲಿ ಬಂಡವಾಳಶಾಹಿ ಮಾದರಿಯ ಬದಲಾವಣೆಗೆ ಅನುವು ಮಾಡಿಕೊಟ್ಟರು. ಹಸಿರು ಕ್ರಾಂತಿಯ ಅನುಷ್ಠಾನ ಕಾರ್ಯತಂತ್ರವನ್ನು ಶ್ರೀಮಂತ ರೈತರಿಗೆ ವಹಿಸುವುದಕ್ಕೆ ಆರಂಭದಲ್ಲೇ "ಬಲಿಷ್ಠರ ಮೇಲೆ ಬಾಜಿ ಕಟ್ಟುವುದು" ಎಂಬ ಪದಪುಂಜವನ್ನು ವಿಲೆಮ್ ವರ್ಟೈಮ್ (Willem Wertheim) ಬಳಸಿದ್ದರು (Wertheim (ವರ್ಟೈಮ್), 1964: 259-278). ಈ ನಿಜವಾದ "ಭೂಮಿ ಪುತ್ರರು" ವಸಾಹತುಶಾಹಿ ಯುಗದ ಪೂರ್ವ ಅಥವಾ ಆರಂಭಿಕ ಬಂಡವಾಳಶಾಹಿ ಅವಲಂಬಿತ ಸಂಬಂಧಗಳ ಮೂಲಕ ಭಾರೀ ಭೂ ಮಾಲೀಕರು, ಲೇವಾದೇವಿದಾರರು ಮತ್ತು ವ್ಯಾಪಾರಿಗಳೊಡನೆ ಹೊಂದಿದ್ದ ನಿರ್ಬಂಧ ಸಂಬಂಧದಿಂದ ತಮ್ಮನ್ನು ಬಿಡಿಸಿಕೊಂಡಿರು. ಸ್ವಾತಂತ್ರ್ಯಕ್ಕೆ ಸ್ವಲ್ಪ ಮೊದಲು ಮತ್ತು ಅನಂತರ ಜಾರಿಗೊಳಿಸಲ್ಪಟ್ಟ ಭೂಮಿ ಹಾಗೂ ಗೇಣಿ ಸುಧಾರಣೆ ಕಾಯಿದೆಗಳ ಪ್ರಮುಖ ಫಲಾನುಭವಿಗಳಾದ ಇವರು, "ಪ್ರಗತಿಪರ ರೈತ" ರೆಂದು ಇವರಿಗೆ ವಹಿಸಿದ ಕೆಲಸ ಅಂದರೆ, ಕೃಷಿಯ ಆಧುನೀಕರಣ ಮತ್ತು ಕೃಷ್ಯುತ್ಪಾದನೆ ಹೆಚ್ಚಳದ ಹೊಣೆಗಾರಿಕೆಯಿಂದ ನುಣುಚಿಕೊಂಡರು. ಅಷ್ಟಲ್ಲದೆ, ಇನ್ನೊಂದು ಮುಖ್ಯವಾದ ಸೇರ್ಪಡೆಯೆಂದರೆ, ಈ ರೈತ ಉದ್ಯಮಿಗಳು ತಮ್ಮ ಉಳಿತಾಯದ ಭಾಗವೊಂದನ್ನು ಕೃಷಿಯಿಂದ ಹೊರತಾದ ಕ್ಷೇತ್ರದಲ್ಲಿ ಹೂಡಿಕೆ ಮಾಡತೊಡಗಿದರು. ಈ ಬೆಳವಣಿಗೆಯು ಗ್ರಾಮೀಣ ಆರ್ಥಿಕತೆಯ ವೈವಿಧ್ಯೀಕರಣವನ್ನು ಉತ್ತೇಜಿಸಿತಲ್ಲದೆ, ಗ್ರಾಮೀಣ-ನಗರದ ನಡುವಿನ ಸಂಬಂಧವನ್ನು ಬಲಪಡಿಸಿತು.

ಹೊರಹೊಮ್ಮಿದ ಬಂಡವಾಳಶಾಹಿಯು ಪ್ರಮುಖ ಪ್ರವೃತ್ತಿಯಾದರೂ, ಅದು ಎಲ್ಲೆಡೆ ಕೃಷಿ ಉತ್ಪಾದನೆಯ ಸಂರಚನೆಯ ಮೇಲೆ ಹಿಡಿತ ಸಾಧಿಸಿಲ್ಲ. ದೇಶದ ನಾನಾ ಕಡೆ ಪರಿವರ್ತನೆಯ ಪ್ರಕ್ರಿಯೆ ಬೇರೆ ಬೇರೆ ಹಂತಗಳಲ್ಲಿ ಆಗಿದೆ. ಪ್ರಾಂತೀಯ ಅಸಮಾನತೆ ಯಾವ ರೀತಿ ಹೆಚ್ಚಳಗೊಂಡಿದೆ ಎಂದರೆ, ಕೇವಲ ಒಂದೇ ರೀತಿಯ ಅಭಿವೃದ್ಧಿ ಮಾದರಿಯ ಹಂತಗಳ ನಡುವಿನ ವ್ಯತ್ಯಾಸಕ್ಕಿಂತ ಇನ್ನೂ ಗಂಭೀರ ವಿಷಯಗಳನ್ನು ಒಳಗೊಂಡಿದೆ ಎಂದು ಊಹಿಸಬಹುದು. ಬಂಡವಾಳಶಾಹಿಯೆಡೆಗಿನ ಚಲನೆಯಲ್ಲಿ ಅಸಮಾನ ಅಭಿವೃದ್ಧಿ ಎನ್ನುವುದು ಸಾಮಾನ್ಯ ಪ್ರವೃತ್ತಿಯ ಒಂದು ಲಕ್ಷಣ ಎನ್ನುವಂತಾಗಿದೆ (Patnaik (ಪಟ್ನಾಯಕ್), 1986:18-20). ಎರಡನೆಯದಾಗಿ, ರೈತ ಬಂಡವಾಳಶಾಹಿಗಳ ಆಕ್ರಮಣಶೀಲ, ವಿಸ್ತರಣೆ ಪ್ರವೃತ್ತಿಯ ವರ್ತನೆಯನ್ನು ಕಡಮೆ ಸಂಪನ್ಮೂಲವುಳ್ಳ, ಹೆಚ್ಚು ಸಂಖ್ಯೆಯ ಸಣ್ಣ ಉತ್ಪಾದಕರು ಅನುಕರಿಸಲು ಸಾಧ್ಯತೆಯನ್ನು ಹೊಂದಿದೆಯೇ ಎಂಬ ಪ್ರಶ್ನೆ ಉದ್ಭವಿಸುತ್ತದೆ. ಈಗ ನಡೆಯುತ್ತಿರುವ ಆರ್ಥಿಕ ಮರುರಚನೆಯ ಪರಿಣಾಮವನ್ನು ಸರಿಯಾಗಿ ಅರ್ಥ ಮಾಡಿಕೊಳ್ಳಬೇಕೆಂದರೆ, ಚಲನಶೀಲ ಪ್ರವೃತ್ತಿ - ಏರು ಮಾರ್ಗಕ್ಕಿಂತ ಇಳಿತವೇ ಹೆಚ್ಚು - ಹಾಗೂ ಸಮಾಜದ ವಿಶಾಲ ವ್ಯಾಪ್ತಿಯ ಮಧ್ಯಮ ಹಂತದಲ್ಲಿ ಕ್ರೋಡೀಕರಣದ ಕಾರ್ಯವಿಧಾನಗಳ ಮೇಲೆ ನಿಗಾವಣೆ ಇಡುವುದು ಬಹಳ ಅಗತ್ಯ. ಅದೇನೇ ಆದರೂ, ಬಂಡವಾಳಶಾಹಿ ಎಷ್ಟು ವೇಗವಾಗಿ ಹಾಗೂ ಬಲವಾಗಿ ವಿಸ್ತರಿಸುತ್ತಿದೆ ಎಂಬುದನ್ನು

ಕೃಷಿ ಶ್ರೇಣೀಕರಣದ ಎರಡು ಧ್ರುವಗಳಲ್ಲಿನ ಪರಿಸ್ಥಿತಿಯನ್ನು ಸ್ಪಷ್ಟಪಡಿಸುವ ಮೂಲಕ ತೋರಿಸಬಹುದು ಎನ್ನುವ ಮಿರ್ದಾಲ್ ಮಾತನ್ನು ನಾನು ಒಪ್ಪುತ್ತೇನೆ.

ದಕ್ಷಿಣ ಗುಜರಾತಿನ ಸೂರತ್ ಜಿಲ್ಲೆಯು ರೈತ ಬಂಡವಾಳಶಾಹಿಯ ರಕ್ಷಕಗಳಲ್ಲಿ ಒಂದು. ಕಳೆದ 25 ವರ್ಷಗಳಿಂದ ಉತ್ಪಾದನೆ ವಿಧಾನದ ಪ್ರಗತಿಗೆ ಸಂಬಂಧಿಸಿದಂತೆ ಪುನರಾವರ್ತಿತ ಕ್ಷೇತ್ರಕಾರ್ಯವನ್ನು ಆಧರಿಸಿದ ಹಲವು ಸೂಕ್ಷ್ಮ ಅಧ್ಯಯನಗಳಲ್ಲಿ ನಾನು ದಾಖಲಿಸಿದ್ದೇನೆ. ಭೂಮಿಯನ್ನು ಹೊಂದಿರುವ ಶ್ರೀಮಂತ ವರ್ಗದವರು ಹಾಗೂ ಭೂರಹಿತ ಕಾರ್ಮಿಕರು ಹೊಂದಿರುವ ಭೂಮಿಯ ವಿಸ್ತೀರ್ಣದಲ್ಲಿ ವ್ಯತ್ಯಾಸವಿದ್ದರೂ, ಈ ಪ್ರದೇಶದ ಕೃಷಿ ಆಧಾರಿತರ ಪ್ರಮಾಣದಲ್ಲಿ ಅಂದಾಜು 2/3 ಜನಸಂಖ್ಯೆಯನ್ನು ಪ್ರತಿನಿಧಿಸಿದ್ದು, ಸಂಯೋಜಿತವಾಗಿ ಈ ಎರಡು ವರ್ಗಗಳು ಪೂರೈಸುವ ಬಂಡವಾಳ ಮತ್ತು ಕಾರ್ಮಿಕ ಬಲವು ಕೃಷಿ ಉತ್ಪನ್ನದ ಹೆಚ್ಚು ಪಾಲನ್ನು ಉತ್ಪಾದಿಸುತ್ತದೆ.

ಎಂಟು ಎಕರೆ ಮತ್ತು ಅದಕ್ಕಿಂತ ಹೆಚ್ಚು ಭೂಮಿ ಹೊಂದಿರುವ ಶ್ರೀಮಂತ ರೈತರಲ್ಲಿ ಹೆಚ್ಚಿನವರು ಸ್ಥಳೀಯ ಪ್ರಬಲ ಜಾತಿಗೆ ಸೇರಿದವರು. ಕಳೆದ ಎರಡು ತಲೆಮಾರುಗಳಿಂದ ಅವರು ಜಿಲ್ಲಾ ಮಟ್ಟದಲ್ಲಿ ಅಧಿಕಾರ ಚಲಾಯಿಸಿದ್ದಾರೆ. ತಮ್ಮದೇ ಆರ್ಥಿಕ ಹಾಗೂ ರಾಜಕೀಯ ಸಂಘಟನೆಗಳನ್ನು ಕಟ್ಟಿಕೊಂಡಿರುವುದರ ಮೂಲಕ ಅವರು, ಈಗ ಸ್ಥಳೀಯ ವ್ಯಾಪ್ತಿಯನ್ನೂ ಮೀರಿ ತಮ್ಮ ಪ್ರಭಾವವನ್ನು ವಿಸ್ತರಿಸಿಕೊಂಡಿದ್ದಾರೆ. ಈ ಉದ್ಯಮಿಗಳು ರಾಜ್ಯವು ಕೃಷಿ ಮತ್ತು ಗ್ರಾಮೀಣ ಪ್ರದೇಶಗಳನ್ನು ಉದ್ದೇಶಪೂರ್ವಕವಾಗಿಯೇ ನಿರ್ಲಕ್ಷಿಸಿದೆ ಎನ್ನುವ ತಮ್ಮ ಅಸಮಾಧಾನವನ್ನು ಉಗ್ರವಾಗಿಯೇ ಪ್ರದರ್ಶಿಸಿರುತ್ತಾರೆ. ಬೆಳವಣಿಗೆಯ ಕೇಂದ್ರಬಿಂದು (growth pole (ಗ್ರೋಥ್ ಪೋಲ್) ಎನ್ನುವುದು ಹೆಚ್ಚು ನವೀನ ಮತ್ತು ತಾಂತ್ರಿಕವಾಗಿ ಮುಂದುವರಿದ ಕೈಗಾರಿಕೆಗಳ ಕೇಂದ್ರೀಕರಣವನ್ನು ಸೂಚಿಸುತ್ತದೆ ಮತ್ತು ಅದು ಸಂಬಂಧಿತ ವ್ಯವಹಾರಗಳು ಮತ್ತು ಕೈಗಾರಿಕೆಗಳಲ್ಲಿ ಆರ್ಥಿಕ ಅಭಿವೃದ್ಧಿಯನ್ನು ಉತ್ತೇಜಿಸುತ್ತದೆ. ಆರ್ಥಿಕ ಅಭಿವೃದ್ಧಿ ಅಥವಾ ಬೆಳವಣಿಗೆ ಇಡೀ ಪ್ರದೇಶದಲ್ಲಿ ಏಕರೂಪವಾಗಿರುವುದಿಲ್ಲ. ಬದಲಿಗೆ ಒಂದು ನಿರ್ದಿಷ್ಟ ಕೇಂದ್ರಬಿಂದುವಿನ (ಅಥವಾ ಸಮೂಹದ) ಸುತ್ತಲೂ ನಡೆಯುತ್ತದೆ ಎನ್ನುವುದೇ ಈ ಸಿದ್ಧಾಂತದ ಮುಖ್ಯ ಕಲ್ಪನೆ.)ವಿನ ಕಾರ್ಯತಂತ್ರದ ನೆಪದಲ್ಲಿ ನಗರ-ಉದ್ಯಮಗಳ ಆಸಕ್ತಿಯನ್ನು ರಕ್ಷಿಸಲು ಆದ್ಯತೆ ನೀಡಬೇಕು ಎನ್ನುವ ಕಲ್ಪನೆಯನ್ನು ಬಲವಾಗಿ ವಿರೋಧಿಸುವ ಗ್ರಾಮೀಣ ಜನಪ್ರಿಯವಾದ (populism)ವನ್ನು ಇವರು ಪ್ರಚಾರ ಮಾಡುತ್ತಾರೆ. ಭಾರತದ ಬೇರೆ ಭಾಗಗಳಲ್ಲಿ ಮುನ್ನೆಲೆಗೆ ಬರುತ್ತಿರವ ರೈತ ಉತ್ಪಾದಕರ ಆಂದೋಲನಗಳಂತೆ, ಇವರ ಮುಖಂಡರಿಗೆ ಕೂಡ ರಾಜಕಾರಣಿಗಳ ಮೇಲೆ ನಂಬಿಕೆ ಇರದ ಕಾರಣ ಆಗಾಗ ತಮ್ಮ ಸಂಘಟನೆಗಳ ಸದಸ್ಯರನ್ನು ಒಗ್ಗೂಡಿಸಿ, ರಾಜಕಾರಣಿಗಳ ಮೇಲೆ ಒತ್ತಡ ಹೇರುತ್ತಾರೆ. ವಿಶಿಷ್ಟ *kulak* (ಕುಲ್ಲಾಕ್ ಎನ್ನುವರು ರಷ್ಯಾದ ಶ್ರೀಮಂತ ರೈತರಾಗಿದ್ದು, ಅವರು ಸಾಪೇಕ್ಷವಾಗಿ ದೊಡ್ಡ ಜಮೀನನ್ನು ಹೊಂದಿದ್ದು ಕಾರ್ಮಿಕರನ್ನು ನೇಮಿಸಿಕೊಳ್ಳಲು ಮತ್ತು ಭೂಮಿಯನ್ನು ಗುತ್ತಿಗೆಗೆ ನೀಡಲು ಸಮರ್ಥರಾಗಿದ್ದರು. 19ನೇ ಶತಮಾನದಲ್ಲಿ ಜೀತದಾಳುಗಳ ವಿಮೋಚನೆಯ ನಂತರ ಹೊರಹೊಮ್ಮಿದ ಕುಲ್ಲಾಕ್ ಸ್ಟ್ಯಾಲಿನ್ ಅವರ ಬಲವಂತದ ಭೂ ಸಂಗ್ರಹಣೆಯನ್ನು ವಿರೋಧಿಸಿದರು.) ನುಡಿಗಟ್ಟಿನಲ್ಲಿ ಅಭಿವ್ಯಕ್ತಗೊಳ್ಳುವ ಅವರ ಬೇಡಿಕೆಗಳು, ರೈತ

ಮಾಲೀಕರ ಹಿತಾಸಕ್ತಿಗಳು ಕೇಂದ್ರಬಿಂದುವಾಗಿರಬೇಕೆಂದು ಒತ್ತಾಯಿಸುತ್ತವೆ. ಮಣ್ಣಿನ ಮಕ್ಕಳ ಹಿತಾಸಕ್ತಿಗಳಿಗೆ ಹೋಲಿಸಿದರೆ ಇನ್ನಿತರ ಗ್ರಾಮೀಣ ವರ್ಗಗಳ ಹಿತಾಸಕ್ತಿಗಳು, ಒಂದು ವೇಳೆ ಅವುಗಳನ್ನು ಪರಿಗಣಿಸಿದಲ್ಲಿ, ಆನುಷಂಗಿಕವಾಗಿರುತ್ತವೆ. ಈ ಮಾದರಿಯ ಕೃಷಿ ಜನಪ್ರಿಯವಾದದ ರಾಷ್ಟ್ರೀಯ ಮಟ್ಟದ ನಾಯಕ ಚರಣ್ ಸಿಂಗ್ (Charan Singh) (Singh (ಸಿಂಗ್), 1986; Byres (ಬೈರಸ್), 1988) ಆಗಿದ್ದರು. ಅವರು ರೈತ-ಬೆಳೆಗಾರರ ಸ್ವಾಯತ್ತತೆಯನ್ನು ಉಳಿಸಿಕೊಳ್ಳುವಂತಹ ಮತ್ತು ಇದರೊಳಗಿಂದ ಪ್ರಾಥಮಿಕವಾಗಿ ಸಣ್ಣ ಪ್ರಮಾಣದ ಉದ್ಯಮವನ್ನು ಮುನ್ನೆಡೆಸುವಂತ ಹೊಸ ರೀತಿಯ ವ್ಯವಸ್ಥಾಪಕನೊಬ್ಬ ಹೊರಹೊಮ್ಮುವ ಕೃಷಿ ಹಾಗೂ ಗ್ರಾಮೀಣ ಉದ್ಯಮದ ಸಮಗ್ರಗೊಳಿಸುವಿಕೆಯನ್ನು ಆಧರಿಸಿದ ಅಭಿವೃದ್ಧಿ ಮಾರ್ಗವನ್ನು ರೂಪಿಸಿದರು. ಈ ಅಭಿವೃದ್ಧಿ ಮಾದರಿಯಿಂದ ಸೃಷ್ಟಿಯಾಗುವ ಉದ್ಯೋಗಗಳು ಎಲ್ಲರ ಒಳಿತಿಗೆ ಕಾಣಿಕೆಯಾಗಿ ಇರುತ್ತವೆ ಎಂದು ಭಾವಿಸಲಾಗಿತ್ತು.

ದಕ್ಷಿಣ ಗುಜರಾತಿನಲ್ಲಿನ ವಾಸ್ತವವು ಈ ಚಿತ್ರಣಕ್ಕೆ ಹೊಂದಿಕೊಳ್ಳುವುದೇ? ಕೃಷಿ ಉತ್ಪಾದನೆ ನಿರೀಕ್ಷಿಸಿದಂತೆ ಅಧಿಕಗೊಂಡಿದೆ ಮತ್ತು ಇದರಿಂದ ಗ್ರಾಮೀಣ ಆರ್ಥಿಕತೆಯು ಸ್ವಯಂ ಪ್ರಚೋದನೆಗೊಂಡು, ನಿಜವಾಗಿಯೂ ರೂಪಾಂತರಗೊಂಡಿದೆ. ಆದಾಗ್ಯೂ, ಭೂರಹಿತರ ಜನಸಂಖ್ಯೆಯ ಬೆಳವಣಿಗೆಗೆ ಅನುಗುಣವಾಗಿ ಉದ್ಯೋಗಾವಕಾಶಗಳು ಬೆಳೆದಿಲ್ಲ. ಕೃಷಿ ಶ್ರೇಣೀಕರಣದ ಕೆಳವರ್ಗದ ಸಂಖ್ಯೆಯಲ್ಲಿನ ಹೆಚ್ಚಳಕ್ಕೆ ಅಧಿಕ ಫಲವತ್ತತೆಗಿಂತ ವಲಸೆಯೇ ಕಾರಣವಾಗಿದೆ. ಬಂಡವಾಳಶಾಹಿಗೆ ಬದಲಾವಣೆಗೊಂಡಿದ್ದರ ಒಂದು ಪರಿಣಾಮವೆಂದರೆ, ಕಾರ್ಮಿಕರು ಬಹುದೂರದವರೆಗೆ ಚಲಿಸುವಂತಾದರು. ಮಿರ್ದಾಲ್ ತಮ್ಮ ಅಧ್ಯಯನದಲ್ಲಿ ಇದನ್ನು ಪರಿಗಣಿಸಿರಲಿಲ್ಲ ಮತ್ತು ಈ ಸಾಧ್ಯತೆಯನ್ನು ಸ್ಪಷ್ಟವಾಗಿಯೇ ಹೊರಗಿಟ್ಟಿದ್ದರು: ವಲಸೆಗೆ ಸಂಬಂಧಿಸಿದಂತೆ ಅವರು ಬರೆದ ಟಿಪ್ಪಣಿಗಳನ್ನು ಓದಿದರೆ, ಇದು ಸ್ಪಷ್ಟವಾಗುತ್ತದೆ. ಅವರ ಅಭಿಪ್ರಾಯದ ಪ್ರಕಾರ, ನಗರ ಪ್ರದೇಶಗಳಿಗೆ ತೆರಳುವುದನ್ನು ಹೊರತುಪಡಿಸಿದರೆ ಗ್ರಾಮೀಣ ಜನರ ಜೀವನವನ್ನು ನಿಶ್ಚಲತೆ ಮತ್ತು ಪ್ರತ್ಯೇಕತೆಯೊಂದಿಗೆ ಗುರುತಿಸಲಾಗುತ್ತದೆ. ಇದಕ್ಕೆ ವಿನಾಯಿತಿಯೆಂದರೆ ನಗರ ಪ್ರದೇಶಗಳಿಗೆ ತೆರಳುವುದು. ಬೇರೆಲ್ಲ ಅಂಶಗಳಿಗಿಂತ ಹೆಚ್ಚಾಗಿ ಬಡತನವು ಜನರು ತಮ್ಮ ಜನ್ಮಸ್ಥಳದಿಂದ ದೂರಹೋಗುವುದನ್ನು ತಡೆಯುತ್ತದೆ:

> ಜನರು ಬಡವರಾಗಿದ್ದಷ್ಟೂ ವಲಸೆಗೆ ಅಡೆತಡೆಗಳು ಬಲಿಷ್ಟವಾಗಿರುತ್ತವೆ; ಬಡತನವು ಸಾಹಸಮಯವಾಗಿರುವಿಕೆಯ ಸಾಧ್ಯತೆಗಳನ್ನು ಸೀಮಿತಗೊಳಿಸುತ್ತದೆ, ಹೊಸದನ್ನು ಪ್ರಯತ್ನಿಸಲು ಇರುವ ಉತ್ತೇಜಕಗಳನ್ನು ಮೊಂಡು ಮಾಡುತ್ತದೆ ಮತ್ತು ಉಪಕ್ರಮಗಳ ಮೇಲಿನ ಎಲ್ಲ ನಿರ್ಬಂಧಗಳನ್ನು ಕಠಿಣಗೊಳಿಸುತ್ತದೆ (ಸಂಪುಟ.III, 1968: 2140)

ದಕ್ಷಿಣ ಗುಜರಾತಿನಲ್ಲಿ, ನನ್ನ ಸಂಶೋಧನೆಯ ಫಲಿತಾಂಶಗಳು ಮಿರ್ದಾಲ್ ಅವರ ಸಂಶೋಧನೆಯ ಫಲಿತಾಂಶಗಳಿಗೆ ತದ್ವಿರುದ್ಧವಾಗಿದ್ದವು. ಬಹುತೇಕ ಒಂದು ಋತುವಿಗೆ ಮಾತ್ರ ಸೀಮಿತವಾದ, ಆದರೆ ಕೆಲವೊಮ್ಮೆ ಹೆಚ್ಚಿನ ಅವಧಿಗೆ ಮುಂದುವರಿಯುತ್ತಿದ್ದ ಕಾರ್ಮಿಕರ ಭಾರಿ ಪ್ರಮಾಣದ ಚಲನೆಯು ಬಂಡವಾಳಶಾಹಿ ಪರಾವೃತ ಪ್ರದೇಶದ ಹಿನ್ನಾಡುಗಳು ಇಂಥ ಉತ್ಪಾದನಾ ವಿಧಾನದೊಂದಿಗೆ ಬಹಳ

ಬಲಿಷ್ಠವಾಗಿ ಜೋಡಿಸಲ್ಪಟ್ಟಿವೆ ಎಂಬುದನ್ನು ತೋರಿಸುತ್ತದೆ. ಕಾರ್ಮಿಕರ ವಲಸೆಯ ಮೇಲಿನ ಬರಹಗಳಲ್ಲಿ ನಿರ್ಲಕ್ಷಿತ ವಿಷಯವಾದ ಗ್ರಾಮೀಣ ಪ್ರದೇಶದೊಳಗಡೆ ಆಗುವ ಗ್ರಾಮೀಣ ಚಲನೆಯು ನೂತನ ಆರ್ಥಿಕ ಪ್ರೇರಕಶಕ್ತಿಯು ಹೇಗೆ ಭಾರತದ ಹಲವು ಭಾಗಗಳುದ್ದಕ್ಕೂ ವ್ಯಾಪಿಸಿಕೊಂಡಿದೆ ಎಂದು ತೋರಿಸುತ್ತದೆ. ಕಾರ್ಮಿಕರ ಚಲನೆ ಹಾಗೂ ಬಂಡವಾಳಶಾಹಿ ಸತ್ತೆಯಲ್ಲಿ ಈ ಉತ್ಪಾದನಾ ಅಂಶಕ್ಕೆ ನೀಡಿರುವ ಮೌಲ್ಯವು ಗ್ರಾಮೀಣ ಪ್ರದೇಶದಲ್ಲಿ ಬಡತನವು ಕಣ್ಮರೆಯಾಗುವುದರ ಬದಲು ಹೆಚ್ಚು ಜನರ ಬದುಕನ್ನು ಏಕೆ ಆಳುತ್ತದೆ ಎನ್ನುವುದನ್ನು ವಿವರಿಸುತ್ತದೆ. ದಕ್ಷಿಣ ಗುಜರಾತಿನಲ್ಲಿ ನನ್ನ ಕ್ಷೇತ್ರಕಾರ್ಯ ಆಧಾರಿತ ಸಂಶೋಧನೆಯ ಫಲಿತಾಂಶಗಳು, ನನ್ನ ಅಭಿಪ್ರಾಯದಲ್ಲಿ, ದೇಶದ ಇತರ ಭಾಗಗಳಲ್ಲಿ ಆಗುತ್ತಿರುವ ಬದಲಾವಣೆಯ ಪ್ರಕ್ರಿಯೆಯನ್ನು ಸೂಚಿಸುತ್ತವೆ (ಚಕ್ರವರ್ತಿ, 1987:27). ನಾನು ಕಂಡ ಸಂಕಷ್ಟಕ್ಕೆ ಬಂಡವಾಳಶಾಹಿಯ ತರ್ಕದ ವಿಚಾರಪರತೆಯು ಕಾರಣ ಎಂದು ಮಿರ್ದಾಲ್ ನೀಡಿದ (ಬಹುಶಃ ತಾನು ಕಂಡುಕೊಂಡ ತೀರ್ಮಾನಗಳಿಗೆ ವಿರುದ್ಧವಾಗಿದ್ದ) ವಿವರಣೆಯನ್ನು ಅದು ತಪ್ಪೆಂದು ಸಾಧಿಸುತ್ತವೆ.

## ಹೊಸ ಭೂದೃಶ್ಯ

ಹತ್ತು ವರ್ಷಗಳ ಹಿಂದೆ ಭಾರತದ ಪಶ್ಚಿಮ ಕರಾವಳಿಯ ದಕ್ಷಿಣ ಗುಜರಾತಿನ ಬಯಲು ಪ್ರದೇಶದಲ್ಲಿ ಸಂಭವಿಸಿದ ಕೃಷಿ ಆರ್ಥಿಕತೆಗಳಲ್ಲಿನ ಬದಲಾವಣೆಗಳಿಂದ ಕಾರ್ಮಿಕ ಆದ ಸಂಬಂಧಗಳ ಮೇಲಿನ ಪರಿಣಾಮ ಕುರಿತು ಸಂಶೋಧನೆಯನ್ನು ನಡೆಸುತ್ತಿದ್ದ ಸಂದರ್ಭವಾಗಿತ್ತು. ಇಲ್ಲಿ ಉದ್ಭವವಾದ ಹೊಸ ಭೂದೃಶ್ಯಕ್ಕೆ ಈ ಫಲವತ್ತಾದ ಭೂಮಿಯ ಹೆಚ್ಚಿನ ಭಾಗಕ್ಕೆ ವರ್ಷವಿಡೀ ಸಾಲುವಷ್ಟು ನೀರು ಪೂರೈಸುವ ನೀರಾವರಿ ವ್ಯವಸ್ಥೆ ಸಂಪೂರ್ಣಗೊಂಡಿದ್ದು ಕಾರಣವಾಗಿತ್ತು. ಜಿಲ್ಲೆಯನ್ನು ನಾಲೆಗಳ ಜಾಲ ವಿಭಾಗಿಸಿದ್ದು, ತಪತಿ ನದಿಗೆ ಮೇಲ್ಭರಿವಿನಲ್ಲಿ ಕಟ್ಟಿದ ಅಣೆಕಟ್ಟು ಇವುಗಳ ಮೂಲವಾಗಿತ್ತು. ನೈಸರ್ಗಿಕ ಪರಿಸರದಲ್ಲಿನ ಹಸ್ತಕ್ಷೇಪವು ಉತ್ಪಾದನಾ ಶಕ್ತಿಗಳನ್ನು ಮುಂದೊತ್ತಿ, ಹೆಚ್ಚಿನ ಮಟ್ಟದ ಅಭಿವೃದ್ಧಿಗೆ ದಾರಿ ಮಾಡಿಕೊಟ್ಟಿತ್ತು. ತೈಲ ಮತ್ತು ಅನಂತರ ವಿದ್ಯುತ್ ಪಂಪ್‌ಗಳಿಂದಾಗಿ ಹೊಸ ಹಾಗೂ ಇನ್ನಷ್ಟು ಆಳದ ಬಾವಿಗಳನ್ನು ತೋಡಲು ಸಾಧ್ಯವಾಗಿದ್ದುದ್ದರಿಂದ ದೀರ್ಘಕಾಲಿಕ ನೀರಾವರಿ ಭೂಮಿಯ ವಿಸ್ತೀರ್ಣವನ್ನು ವಿಸ್ತರಿಸಲು ಸಹ ಸಾಧ್ಯವಾಯಿತು.

ತರಿ ಜಮೀನಿನ ಕೃಷಿಗೆ ಬದಲಾವಣೆಗೊಂಡ ಕಾರಣ ಬೆಳೆ ವಿಧಾನದಲ್ಲಿ ಭಾರಿ ಎನ್ನಬಹುದಾದ ಬದಲಾವಣೆಗಳು ಆದವು. ಒಂದು ಶತಮಾನದಿಂದ ಬಳಕೆಯಲ್ಲಿದ್ದ ಸಿರಿಧಾನ್ಯ, ಹತ್ತಿ ಹಾಗೂ ಸ್ವಲ್ಪಮಟ್ಟಿಗೆ ನೆಲಗಡಲೆ ಹಿಂದೆ ಸರಿದು, ಬತ್ತ, ಬಾಳೆ ಹಾಗೂ ಹೆಚ್ಚು ಹೆಚ್ಚಾಗಿ ಕಬ್ಬಿನ ಕೃಷಿಗೆ ದಾರಿ ಮಾಡಿಕೊಟ್ಟವು. ಹಲವು ಗ್ರಾಮಗಳಲ್ಲಿ ಒಟ್ಟು ಕೃಷಿಯೋಗ್ಯ ಭೂಮಿಯಲ್ಲಿ ಅರ್ಧ ಅಥವಾ ಅದಕ್ಕಿಂತ ಹೆಚ್ಚು ಭೂಮಿಯಲ್ಲಿ ಕಬ್ಬು ಬೆಳೆಯಲಾರಂಭಿಸಿದರು.

ಕೃಷಿ ಇನ್ನಷ್ಟು ತೀವ್ರವಾಗಲು ನೀರಾವರಿ ಭೂಮಿ ಹೆಚ್ಚಳ ಭಾಗಶಃ ಕಾರಣವಾದರೂ, ಈ ಅಂಶದ ಮಹತ್ವವನ್ನು ನಿರ್ಲಕ್ಷಿಸಲಾಗುವುದಿಲ್ಲ. ಹಸಿರು ಕ್ರಾಂತಿಯು ದಕ್ಷಿಣ ಗುಜರಾತಿನ ಕೇಂದ್ರ ಭಾಗದ ಬಯಲು ಪ್ರದೇಶಗಳ ಮೇಲೆ

ಮೊದಲು ಕೇಂದ್ರೀಕರಿಸಿದ್ದುದ್ದರಿಂದ ಅಲ್ಲಿನ ಇಳುವರಿಯು ಹೆಚ್ಚಳಗೊಂಡಿತು. 1962-63ರಲ್ಲಿ ತೀವ್ರ ಕ್ಷೇತ್ರ ಜಿಲ್ಲಾ ಕಾರ್ಯಕ್ರಮದಿಂದ ಪ್ರಾರಂಭಗೊಂಡ ಸೌಲಭ್ಯಗಳ ಹೊಸ ಪ್ಯಾಕೇಜಿನ ಉತ್ತೇಜನದಿಂದಾಗಿ ರೈತರಿಗೆ ಉತ್ತಮ ಗುಣಮಟ್ಟದ ಬೀಜಗಳು, ಹೆಚ್ಚು ಗೊಬ್ಬರ, ಕೃಷಿ ವಿಸ್ತರಣೆ ಸೇವೆಗಳು ಹಾಗೂ ತಮ್ಮ ಸಾಧನ-ಸಲಕರಣೆಗಳನ್ನು, ಕೃಷಿ ವಿಧಾನಗಳನ್ನು ಮತ್ತು ಗದ್ದೆಗಳ ನಿರ್ವಹಣೆಯನ್ನು ಆಧುನೀಕರಿಸಲು, ಉದಾರವಾಗಿ ಸಾಲ ಸೌಲಭ್ಯ ದೊರೆಯುವಂತಾಯಿತು.

ಇನ್ನೊಂದು ಪ್ರಮುಖ ಅಂಶವೆಂದರೆ, ಮೂಲಸೌಲಭ್ಯ ಉತ್ತಮಗೊಂಡಿದ್ದರಿಂದ ರಸ್ತೆಗಳ ಜಾಲ ವಿಸ್ತರಣೆಗೊಂಡಿತು ಮತ್ತು ಇದು ಯಾಂತ್ರೀಕೃತ ಸಾಗಣೆಗೆ ಬದಲಾಗಲು ಪ್ರೇರೇಪಿಸಿತು. ಈ ಪ್ರಾಂತ್ಯದಲ್ಲಿ ಪ್ರವಾಸ ಮಾಡುವವರು ಆಧುನಿಕತೆಯ ಹಲವು ಗುರುತುಗಳನ್ನು ನೋಡದಿರಲು ಸಾಧ್ಯವಿಲ್ಲ. ರಸ್ತೆಗಳಲ್ಲಿ ಸಂಚಾರ ದಟ್ಟಣೆ: ಕೃಷಿ ಉತ್ಪನ್ನಗಳನ್ನು ಉಗ್ರಾಣ (depots)ಗಳಿಗೆ ಸಂಸ್ಕರಣೆ ಇಲ್ಲವೇ ಬೇರೆಡೆಗೆ ಸಾಗಿಸಲು ಸಂಚರಿಸುತ್ತಿರುವ ಭರ್ತಿ ಲಾರಿಗಳು ಮತ್ತು ಟ್ರೇಲರ್ ಉಳ್ಳ ಟ್ರ್ಯಾಕ್ಟರ್‌ಗಳು; ಗ್ರಾಮೀಣ ಪ್ರದೇಶಕ್ಕೆ ಸಂಪರ್ಕ ಕಲ್ಪಿಸುವ ಜನದಟ್ಟಣೆಯ, ಆಗಾಗ ಆಗಮಿಸುವ ಹಾಗೂ ಊರು ತೊರೆಯಲು ನೆರವಾಗುವ ಬಸ್‌ಗಳು; ಸೈಕಲ್, ಮೊಪೆಡ್, ಸ್ಕೂಟರ್, ಮೋಟರ್ ಬೈಕ್ ಮತ್ತು ಕಾರುಗಳ ಹಿಂಡು - ಇವೆಲ್ಲವೂ ಚಲನೆಯನ್ನು ಆಗುಮಾಡಿದ ಸಂಪರ್ಕದ ಹೊಸ ಮಾದರಿಯ ಪ್ರಾಧಾನ್ಯವನ್ನು ತೋರಿಸುತ್ತವೆ. ಈ ಸಜೀವ ಚಿತ್ರದ ಹಿನ್ನೆಲೆಯಲ್ಲಿ ವರ್ಷವಿಡೀ ನೀರು, ಯಂತ್ರಗಳು ಮತ್ತು ಕಾರ್ಮಿಕರು ತೊಡಗಿಸಿಕೊಂಡಿರುವ ತೀವ್ರವಾಗಿ ಕೃಷಿಗೊಳಪಟ್ಟ ಜಮೀನು ಇತ್ತು. ಕೃಷಿಯೇತರ ವಸ್ತುಗಳು ಮತ್ತು ಸೇವೆಗಳ ಪೂರೈಕೆ ಕೂಡ ಸಾಕಷ್ಟು ಹೆಚ್ಚಳಗೊಂಡಿದೆ. ಹಳ್ಳಿಗಳಲ್ಲಿ ಹೆಚ್ಚಿದ ಅಂಗಡಿಗಳು ಅಧಿಕ ಪ್ರಮಾಣದಲ್ಲಿ ಹಾಗೂ ಉತ್ತಮ ಗುಣಮಟ್ಟದ ಅನುಭೋಗ ವಸ್ತುಗಳನ್ನು ಮಾರುತ್ತಿದ್ದು, ಗ್ರಾಮೀಣ ಪ್ರದೇಶದಲ್ಲಿ ಕನಿಷ್ಠ ಪ್ರಮಾಣದ ಜನರ ಖರೀದಿ ಸಾಮರ್ಥ್ಯ ಹೆಚ್ಚಳವನ್ನು ತೋರಿಸುತ್ತಿದ್ದವು. 1960ರ ಆರಂಭದಲ್ಲಿ ಕ್ಷೇತ್ರಕಾರ್ಯದ ವೇಳೆ ನಾನು ನೋಡಿದ್ದ ಭೂದೃಶ್ಯ (Breman (ಬ್ರೆಮನ್), 1974 : 231-233) ಮುಂದಿನ ಕಾಲು ಶತಮಾನದಲ್ಲಿ ಗುರುತು ಹಿಡಿಯಲು ಆಗದಂತೆ ಬದಲಾಗಿತ್ತು.

ಜನಸಂಖ್ಯೆಯ ಹೆಚ್ಚಳವು ಕೃಷಿ ಸಂಪನ್ಮೂಲಗಳ ಮೇಲೆ ಹೆಚ್ಚು ಒತ್ತಡ ಹೇರಿದೆ. ಬಯಲು ಪ್ರದೇಶದ ಮಧ್ಯಭಾಗದಲ್ಲಿ ಜನಸಂಖ್ಯಾ ಸಾಂದ್ರತೆಯು ಈಗ ಚದರ ಕಿ.ಮೀ.ಗೆ 350 ಅನ್ನು ದಾಟಿದೆ. ಒಂದೆಡೆ, ಕೃಷಿಯ ಪ್ರೇರಕಶಕ್ತಿಯು ಹೊಸ ಉದ್ಯೋಗಾವಕಾಶಗಳನ್ನು ಸೃಷ್ಟಿಸಿದೆ: ಅದೇ ಹೊತ್ತಿಗೆ ಯಾಂತ್ರೀಕರಣದಿಂದ ಕೌಶಲರಹಿತ ಕಾರ್ಮಿಕರಿಗೆ ಬೇಡಿಕೆ ಕಡಮೆಯಾಗಿದೆ. ಆದಾಗ್ಯೂ, ಆರ್ಥಿಕ ವೈವಿಧ್ಯೀಕರಣದಿಂದ ಮತ್ತು ಶೇ.2.6ರ ವಾರ್ಷಿಕ ಸ್ವಾಭಾವಿಕ ಜನಸಂಖ್ಯೆ ಹೆಚ್ಚಳದಿಂದಾಗಿ ಕಳೆದ 25 ವರ್ಷಗಳಲ್ಲಿ ಜನಸಂಖ್ಯೆ ಬಹುತೇಕ ದುಪ್ಪಟ್ಟಾಗಿದ್ದು, ಗ್ರಾಮೀಣ ಕನಿಷ್ಠ ಜೀವನಾಧಾರದ ಒಟ್ಟಾರೆ ಅವಕಾಶ ವಾಸ್ತವಿಕವಾಗಿ ಹೆಚ್ಚಳಗೊಂಡಿದೆ.

ಉತ್ಪಾದನಾ ಶಕ್ತಿಗಳ ಅಭಿವೃದ್ಧಿಯು ಕಟ್ಟಡ ಸಂಬಂಧಿತ ವಹಿವಾಟುಗಳಿಗೆ ಬಲವಾದ ಪ್ರಚೋದನೆ ನೀಡಿತು. ಹೆಚ್ಚಿನ ಕಚ್ಚಾ ವಸ್ತುಗಳು ಪ್ರಾಂತ್ಯದೊಳಗೇ

ಉತ್ಪತ್ತಿಯಾಗುತ್ತಿದ್ದವು ಮತ್ತು ಅವುಗಳನ್ನು ಸಣ್ಣ ಪ್ರಮಾಣದ ಉದ್ಯಮಗಳಲ್ಲಿ ಕಲ್ಲು, ಇಟ್ಟಿಗೆ, ನೆಲ ಮತ್ತು ಚಾವಣಿ ಹೆಂಚು (ಚದರ ಬಿಲ್ಲೆಗಳು), ಸಿಮೆಂಟ್ ಕೊಳವೆಗಳು, ಮರಮುಟ್ಟು ಇತ್ಯಾದಿಯಾಗಿ ಸಂಸ್ಕರಿಸಲಾಗುತ್ತಿತ್ತು. ರಸ್ತೆ ಹಾಗೂ ನೀರಾವರಿ ನಾಲೆಗಳ ನಿರ್ಮಾಣ ಮತ್ತು ಸಾರ್ವಜನಿಕ ಕಟ್ಟಡಗಳು ಹಾಗೂ ಮನೆಗಳ ನಿರ್ಮಾಣಕ್ಕೆ ಬಳಕೆಯಾಗುತ್ತಿದ್ದ ಈ ಉತ್ಪನ್ನಗಳಿಗೆ ಬೇಡಿಕೆ ಅಗಾಧವಾಗಿ ಹೆಚ್ಚಳಗೊಂಡಿತು. ಸಾಗಣೆಯ ಮೋಟರೀಕರಣ ಮತ್ತು ಕೃಷಿಯ ಯಾಂತ್ರೀಕರಣಕ್ಕೆ ಹೆಚ್ಚಿನ ತಾಂತ್ರಿಕ ಕೌಶಲ ಅಗತ್ಯವಿದ್ದುದರಿಂದ, ಜನ-ವಾಹನ ದಟ್ಟಣೆ ಇದ್ದ ವೃತ್ತಗಳಲ್ಲಿ ದುರಸ್ತಿ ಹಾಗೂ ಸರಿದೂಗಿಕೆಗೆ ಕಾರ್ಯಾಗಾರಗಳು ತಲೆಯೆತ್ತಿದವು. ಗ್ರಾಮೀಣ ಪ್ರದೇಶಕ್ಕೆ ವಿದ್ಯುತ್ ಜಾಲವನ್ನು ವಿಸ್ತರಿಸಿದ್ದರಿಂದ ಹಲವು ದಶಕಗಳ ಹಿಂದೆ ಸೂರತ್ ಮತ್ತು ನವಸಾರಿಯಲ್ಲಿ ಕೇಂದ್ರೀಕೃತವಾಗಿದ್ದ ವಜ್ರೋದ್ಯಮ ಹಳ್ಳಿಗಳ ಕಡೆಗೆ ಹರಡಿಕೊಂಡಿತು. ನಿರ್ದಿಷ್ಟವಾಗಿ ಹೇಳಬೇಕೆಂದರೆ, 1970ರಲ್ಲಿ ಕಚ್ಚಾ ವಜ್ರವನ್ನು ಕತ್ತರಿಸುವ ಹಾಗೂ ಹೊಳಪು ಕೊಡುವ ಘಟಕಗಳು ಹಳ್ಳಿಗಳಲ್ಲಿ ಹೆಚ್ಚಿದವು. ಈ ಎಲ್ಲ ಚಟುವಟಿಕೆಗಳ ಒಟ್ಟು ಪರಿಣಾಮವೇನೆಂದರೆ, 1980ರ ಆರಂಭದಲ್ಲಿ ಸೂರತ್ ಜಿಲ್ಲೆಯ ನಗರಿಗರಲ್ಲದ ಜನಸಂಖ್ಯೆಯ ಅಂದಾಜು 1/3ರಷ್ಟು ಮಂದಿ ಕೃಷಿಯಿಂದ ಹೊರಗೆ ಕೆಲಸ ಮಾಡುತ್ತಿದ್ದರು. ಇದು ಒಟ್ಟಾರೆ ಗುಜರಾತ್ ರಾಜ್ಯದ ಗ್ರಾಮೀಣ ಕ್ಷೇತ್ರದ ಅಂದಾಜಿಗಿಂತ ಹೆಚ್ಚಾಗಿತ್ತು.

ವೈವಿಧ್ಯೀಕರಣ ಪ್ರವೃತ್ತಿಯ ಇನ್ನಷ್ಟು ಗಮನಾರ್ಹ ಅಂಶವೆಂದರೆ, ನೂತನ ಕೃಷಿ ಉದ್ಯಮಗಳ ಹೆಚ್ಚಳ. ಇವುಗಳಲ್ಲಿ ಮುಖ್ಯವಾದದ್ದು-ಪ್ರಾಂತ್ಯದಲ್ಲಿ ಉತ್ಪತ್ತಿಯಾಗುವ ಎಲ್ಲ ಕಬ್ಬನ್ನು ಸಂಸ್ಕರಿಸಬಲ್ಲ ಸಕ್ಕರೆ ಕಾರ್ಖಾನೆಗಳು. ಇಂಥ ಕಾರ್ಖಾನೆಗಳಲ್ಲಿ ಒಂದು ರಾಸಾಯನಿಕ ದ್ರಾವಣ ಅಸಿಟೋನ್ (acetone) ಅನ್ನು ಉತ್ಪಾದಿಸುತ್ತದೆ. ಇದರ ಜೊತೆಗೆ, ಕಬ್ಬಿನ ರದ್ದಿ, ಬತ್ತದ ಹೊಟ್ಟು ಮತ್ತು ಹುಲ್ಲು ಜಿಲ್ಲೆಯಲ್ಲಿ ಆರಂಭವಾದ ಆರು ಕಾಗದದ ಕಾರ್ಖಾನೆಗಳಿಗೆ ಕಚ್ಚಾ ವಸ್ತುವಾಗಿವೆ. ಈ ಕಾರ್ಖಾನೆಗಳ ಉತ್ಪಾದನಾ ಸಾಮರ್ಥ್ಯ ಮಿತವಾಗಿದ್ದು, ಅವು ಹುಲ್ಲಿನ ಹಲಗೆ ಹಾಗೂ ಪ್ಯಾಕ್ ಮಾಡಲು ಬಳಸುವ ಕಾಗದದ ಉತ್ಪಾದನೆಯಲ್ಲಿ ಪರಿಣತಿ ಪಡೆದಿವೆ. ಈ ನವೀನ ಕೃಷಿ-ಕೈಗಾರಿಕಾ ಸಮುಚ್ಚಯವು ಉದ್ಯಮದ ಇನ್ನಿತರ ವಿಭಾಗಗಳ ಮೇಲೆ ಪ್ರಚೋದನಾತ್ಮಕ ಪರಿಣಾಮ ಬೀರಿದೆ. ಉದಾಹರಣೆಗೆ, ಬಯಲು ಪ್ರದೇಶದ ಕೇಂದ್ರ ಪಟ್ಟಣವಾದ ಬಾಡೋ‌ಲಿಯಲ್ಲಿ ಸ್ಥಳೀಯ ಕಮ್ಮಾರಸಾಲೆಯೊಂದು ಕಾಗದದ ಕಾರ್ಖಾನೆಗಳ ಯಂತ್ರಗಳ ಉತ್ಪಾದನೆಯಲ್ಲಿ ವಿಶೇಷ ಪರಿಣತಿ ಇರುವ ಭಾರಿ ಎಂಜಿನಿಯರಿಂಗ್ ಕಾರ್ಖಾನೆಯಾಗಿ ಬೆಳೆದಿದೆ. ಪ್ರಾಂತ್ಯದಲ್ಲಿ ಹಲವಾರು ಸಂಪೂರ್ಣ ಯಂತ್ರ ದಜಾರುಗಳನ್ನು ಯಶಸ್ವಿಯಾಗಿ ಸ್ಥಾಪಿಸಿದ ಬಳಿಕ, ಈ ಕುಟುಂಬ ನಿರ್ವಹಿಸುವ ವ್ಯವಹಾರ ಇಂಥದ್ದೇ ಸಾಧನಗಳಿಗೆ ದೇಶದ ಬೇರೆಡೆಯಿಂದ ಹಾಗೂ ಹೊರದೇಶಗಳಿಂದ ಖರೀದಿ ಆದೇಶಗಳನ್ನು ಪಡೆದುಕೊಂಡಿದೆ. ಅಂತಿಮವಾಗಿ, ಮಧ್ಯ ಗುಜರಾತಿನ ಪ್ರಖ್ಯಾತ ಅಮುಲ್ ಹಾಲು ಸಂಘದ ಮಾದರಿಯಲ್ಲಿ ಜಾನುವಾರು ಸಾಕಣೆಯು ಹೆಚ್ಚು ವ್ಯವಹಾರದ ಸ್ವರೂಪವನ್ನು ಪಡೆದಿದೆ . ಸೂರತ್ ನಗರದಲ್ಲಿ ಹೈನುಗಾರಿಕೆ ಸಹಕಾರ ಸಂಘವೊಂದು ಹಾಲಿನ ವಿತರಣೆ, ಸಂಸ್ಕರಣೆಯಲ್ಲದೆ, ಸ್ವಂತದ ಜಾನುವಾರು ಆಹಾರ ಉತ್ಪಾದನೆ ಕಾರ್ಖಾನೆಯನ್ನೂ ಸ್ಥಾಪಿಸಿದೆ. ದೊಡ್ಡ ಕೋಳಿ ಸಾಕಣೆ ಕೇಂದ್ರಗಳಿಂದ ಸಂಗ್ರಹಿಸಿದ ಮೊಟ್ಟೆಗಳನ್ನು ದೂರದ ನಗರಗಳ ಮಾರುಕಟ್ಟೆಯಲ್ಲಿ ಮಾರಲಾಗುತ್ತಿದೆ.

ದಕ್ಷಿಣ ಗುಜರಾತಿನ ಗ್ರಾಮೀಣ ಪ್ರದೇಶದಲ್ಲಿ ಕೃಷಿ ಹಾಗೂ ಉದ್ಯಮಗಳು ಬಂಡವಾಳ ಮತ್ತು ನಿರ್ವಹಣೆಗೆ ಸಂಬಂಧಪಟ್ಟಂತೆ ತೀರ ನಿಕಟವಾಗಿ ಒಂದಕ್ಕೊಂದು ಹೆಣೆದುಕೊಂಡಿವೆ. ಈ ಪರಸ್ಪರ ಸಂಬಂಧವನ್ನು ತೋರಿಸಲು ಕಳೆದ ಕೆಲವು ವರ್ಷಗಳಿಂದ ಹಲವಾರು ಗ್ರಾಮಗಳಲ್ಲಿ ಏಕ ಬೆಳೆಯಾಗಿ ಬದಲಾಗಿದ ಕಬ್ಬಿನ ಕೃಷಿ ಹಾಗೂ ಸಂಸ್ಕರಣೆಯನ್ನು ದೃಷ್ಟಾಂತವಾಗಿ ಕೊಡಬಹುದು. 1960ರ ಆರಂಭದಲ್ಲಿ ಕಬ್ಬಿನ ಬೆಳೆ ಪ್ರದೇಶ 1,000 ಎಕರೆ (1 ಎಕರೆ=0.4 ಹೆಕ್ಟೇರ್) ಇದ್ದದ್ದು, ಎರಡು ದಶಕಗಳಲ್ಲಿ 1,42,000 ಎಕರೆಗೆ ಹೆಚ್ಚಳಗೊಂಡಿದೆ. 1957ರಲ್ಲಿ ಸಣ್ಣ ಪ್ರಮಾಣದಲ್ಲಿ ಆರಂಭಗೊAಡ ಮೊದಲ ಕಾರ್ಖಾನೆ ಈಗ ಏಷ್ಯಾದ ಅತ್ಯಂತ ದೊಡ್ಡ ಸಹಕಾರ ಸಕ್ಕರೆ ಉದ್ಯಮವಾಗಿದ್ದು, ಅದರ ದೈನಂದಿನ ಉತ್ಪಾದನಾ ಸಾಮರ್ಥ್ಯ 75,000 ಟನ್. ಪ್ರಾಂತ್ಯದಲ್ಲಿ ಪ್ರಸ್ತುತ ಅಂಥ ಏಳು ಕಾರ್ಖಾನೆಗಳಿದ್ದು, ಇನ್ನೂ ಹಲವು ನಿರ್ಮಾಣಗೊಳ್ಳುತ್ತಿವೆ. ಯಾವುದೇ ಉತ್ಪ್ರೇಕ್ಷೆಯಿಲ್ಲದೆ ಹೇಳಬಹುದಾದದ್ದೆಂದರೆ, ಕಳೆದ ಕೆಲವು ದಶಕಗಳಲ್ಲಿ ಭಾರತದ ಇನ್ನಿತರ ಭಾಗಗಳಲ್ಲಿ ಆದಂತೆ ದಕ್ಷಿಣ ಗುಜರಾತಿನಲ್ಲಿ ಕೃಷಿಯು ಉದ್ಯಮದ ರೂಪ ತಳೆದಿದೆ. ಈ ಬೆಳವಣಿಗೆಗಳಿಂದ ಕಾರ್ಮಿಕರ ಮೇಲಿನ ಪರಿಣಾಮ ಕುರಿತು ಪರಿಶೀಲಿಸುವ ಮುನ್ನ ಮೊದಲಿಗೆ ದಕ್ಷಿಣ ಗುಜರಾತಿನ ಬಯಲು ಪ್ರದೇಶದಲ್ಲಿ ಮೇಲುಗೈ ಸಾಧಿಸಿರುವ ನವೀನ ಬಂಡವಾಳಶಾಹಿ ಉತ್ಪಾದನಾ ಮಾದರಿಯ ಪರಿವರ್ತನೆಯ ಮುಂಚೂಣಿಯಲ್ಲಿದ್ದ ಭೂಮಾಲೀಕ ವರ್ಗದವರ ಕುರಿತು ನಾನು ಚರ್ಚಿಸುತ್ತೇನೆ.

**ಕೃಷಿಕ ಉದ್ಯಮಿಗಳು**

1960ರಲ್ಲಿ ಜಿಲ್ಲೆಯ ಶೇ.50ಕ್ಕೂ ಅಧಿಕ ಬೇಸಾಯ ಮಾಡಬಹುದಾದ ಭೂಮಿಯಲ್ಲಿ ವಿನಿಯೋಗಿಸಬಹುದಾದ ಕೃಷಿ ಭೂಮಿಯ ಶೇ.25ಕ್ಕಿಂತ ಕಡಮೆ ಕೃಷಿಕರ ಹಿಡಿತದಲ್ಲಿ ಇತ್ತು. ಕೃಷಿ ಏಣಿಯ ಮೇಲಿನ ಹಂತದಲ್ಲಿದ್ದ ಶೇ.10ರಿಂದ 15ರಷ್ಟು ಶ್ರೀಮಂತ ರೈತರ ಹಿಡಿತದಲ್ಲಿ ಲಭ್ಯ ಭೂಮಿಯ ಅಂದಾಜು ಶೇ.50ರಷ್ಟು ಇತ್ತು. ಇವರಲ್ಲಿ ಹೆಚ್ಚಿನವರು ಪ್ರಮುಖ ಪಟಿದಾರ್ ಜಾತಿಗೆ ಸೇರಿದವರಾಗಿದ್ದರು. ಒಟ್ಟು ಜನಸಂಖ್ಯೆಯಲ್ಲಿ ಪಟಿದಾರ ಸಮುದಾಯದ ಪಾಲು ಶೇ.7 ಮಾತ್ರವಿದ್ದರೂ, ಅವರು ಸಾಮಾಜಿಕ ಶ್ರೇಣೀಕರಣದ ಮೇಲ್ತುದಿಯಲ್ಲಿದ್ದರು.

ಗ್ರಾಮೀಣ ಶ್ರೀಮಂತರೆಂದು ಅವರ ಪ್ರಸ್ತುತ ಸ್ಥಾನಮಾನಕ್ಕೆ ಅವರ ಉನ್ನತಿಯು ಎರಡರಿಂದ ಮೂರು ತಲೆಮಾರಿಗೆ ಹೋಗುತ್ತದಷ್ಟೆ. ಈ ಶತಮಾನದ ಆರಂಭದಲ್ಲಿ ಪಟಿದಾರರು ಹೋಲಿಕೆಯಲ್ಲಿ ಕೆಳ ವಂಶಗಳಿಗೆ ಸೇರಿದ ಸರಳ ಹಾಗೂ ಶ್ರದ್ಧಾವಂತ ಕೃಷಿಕರಾಗಿದ್ದು, ಜನರ ನೆನಪಿನಲ್ಲಿ ಇನ್ನೂ ಇರುವ, ಅವರ ಹಿರಿಯರನ್ನು ತಮ್ಮ ಸ್ವಸ್ಥಳವಾದ ಈಶಾನ್ಯ ಪ್ರದೇಶದಿಂದ ಸ್ಥಳಾಂತರಗೊಳ್ಳುವಂತೆ ಮಾಡಿದ ಬರಗಾಲದ ನಂತರ ಈ ಪ್ರದೇಶದಲ್ಲಿ ಬಂದು ನೆಲೆಸಿದವರಾಗಿದ್ದರು. 1860ರ ದಶಕದ ಬಳಿಕ ಹತ್ತಿ ಕೃಷಿಯನ್ನು ಪರಿಚಯಿಸಿ, ಅದು ತೀವ್ರವಾಗಿ ವಿಸ್ತರಿಸಿದ ಬಳಿಕ ಪಶ್ಚಿಮ ಭಾರತದಲ್ಲಿ ವಸಾಹತುಶಾಹಿ ಆಡಳಿತದಲ್ಲಿ ಕೃಷಿ ವಾಣಿಜ್ಯೀಕರಣಗೊಂಡಿತು. ನಗರಗಳು ಅಥವಾ ವಿದೇಶದ ವ್ಯಾಪಾರಿಗಳ ಮೂಲಕ

ಜಾಗತಿಕ ಮಾರುಕಟ್ಟೆಯ ಸಂಪರ್ಕ ಬೆಳೆಸಿಕೊಂಡಿತು. ಅವರು ನೀಡಿದ ಸಾಲ ಸೌಲಭ್ಯದಿಂದಾಗಿ ರೈತರು ಅವರ ಮುಲಾಜಿಗೆ ಸಿಲುಕಿಕೊಂಡರು.

20ನೇ ಶತಮಾನದ ಆರಂಭದ ದಶಕಗಳಲ್ಲಿ ಮೊದಲಿಗೆ ಹತ್ತಿಯ ಖರೀದಿ ಹಾಗೂ ಅನಂತರ ಅದರ ಸಂಸ್ಕರಣೆಗೆ ತಮ್ಮದೇ ಸಹಕಾರ ಸಂಘಗಳನ್ನು ಕಟ್ಟಿಕೊಂಡ ಪಟಿದಾರರು, ಆರ್ಥಿಕ ಹಾಗೂ ಸಾಮಾಜಿಕವಾಗಿ ಮುನ್ನಡೆ ಸಾಧಿಸಿದರು. ಮಾರುಕಟ್ಟೆ ಮೇಲೆ ಉತ್ಪಾದಕರ ನಿಯಂತ್ರಣದ ಹೆಚ್ಚಳವು ದಕ್ಷಿಣ ಗುಜರಾತಿನ ಗ್ರಾಮೀಣ ಪ್ರದೇಶಗಳಲ್ಲಿ ಬಂಡವಾಳಶಾಹಿ ಮಾದರಿಯ ಉತ್ಪಾದನೆಯ ಪ್ರವೇಶಿಸುವಿಕೆಗೆ ನೆರವಾಗುವಲ್ಲಿ ಪ್ರಮುಖ ಹೆಜ್ಜೆಯಾಗಿದ್ದು, ಸ್ವಾತಂತ್ರ್ಯಕ್ಕೆ ಮುನ್ನ ಹಾಗೂ ಅನಂತರ ಜಾರಿಗೊಂಡ ಗೇಣಿದಾರಿಕೆ ಸುಧಾರಣೆಗಳು ಇದಕ್ಕೆ ವೇಗೋತ್ಕರ್ಷ ನೀಡಿದವು.

ನೀರಾವರಿ ಕೃಷಿಯನ್ನು ಅಳವಡಿಸಿಕೊಂಡ ಬಳಿಕ ಈಗಾಗಲೇ ತಮ್ಮ ಉಪಯುಕ್ತತೆಯನ್ನು ಸಾಬೀತುಪಡಿಸಿದ್ದ ಸಹಕಾರ ಸಂಘಗಳು ಪಟಿದಾರರ ಆರ್ಥಿಕ ಮಾದರಿಗಳಾಗಿ ಮುಂದುವರಿದವಲ್ಲದೆ, ಅವುಗಳ ಮೂಲಕ ಜಮೀನಿನ ನಿರ್ವಹಣೆ ಮಾಡಿದರು. ಇದು ಅವರ ಚಟುವಟಿಕೆಗಳ ಪ್ರಮಾಣವನ್ನು ವಿಸ್ತರಿಸಿಕೊಳ್ಳಲು ನೆರವಾಯಿತು. ಬಾರ್ಡೋಲಿಯ ಸಹಕಾರ ಸಂಘವೊಂದರ ಸದಸ್ಯರು ಬಾಳೆ ಕೃಷಿಯಲ್ಲಿ ಪರಿಣತಿ ಹೊಂದಿದ್ದರು. ಸಂಘವು ಉತ್ಪನ್ನವನ್ನು ಸ್ಥಳೀಯ ಮಾರುಕಟ್ಟೆಗೆ ಮಾತ್ರ ಮಾರಾಟ ಮಾಡುವುದರಿಂದ ತೃಪ್ತಿ ಹೊಂದಲಿಲ್ಲ; 1960ರ ಅಂತ್ಯದಲ್ಲಿ ಸದಸ್ಯರ ಉತ್ಪನ್ನಗಳನ್ನು ಮಧ್ಯಪ್ರಾಚ್ಯದ ಗಲ್ಫ್ ರಾಜ್ಯಗಳಿಗೆ ರಫ್ತು ಮಾಡಲು ಸರಕು ನೌಕೆ ಯಾ ವಿಮಾನ (freighter)ವನ್ನು ಗುತ್ತಿಗೆಗೆ ತೆಗೆದುಕೊಂಡಿತು. ಅದೇ ಹೊತ್ತಿನಲ್ಲಿ ಪಟಿದಾರ್ ಭೂ ಮಾಲೀಕರು ಪ್ರಗತಿಪರ ಕೃಷಿಕರ ಮುಂಚೂಣಿಗರೆಂದು ಸಾಮಾಜಿಕ ಮನ್ನಣೆ ಗಳಿಸಿದ್ದರಲ್ಲದೆ, ಸಹಕಾರ ಸಂಘಗಳನ್ನು ನಿಯಂತ್ರಿಸುತ್ತಿದ್ದರು ಮತ್ತು ಸಂಘಗಳಿಗೆ ಹೆಚ್ಚಿನ ಪಾಲು ನಿರ್ವಹಣೆ ಸಿಬ್ಬಂದಿಗಳನ್ನು ಒದಗಿಸುತ್ತಿದ್ದರು.

ಜಾತಿ ಆಧಾರದ ಮೇಲೆ ಸಮೀಕರಿಸುವುದು ಸಹಕಾರ ತತ್ತ್ವವನ್ನು ಆಧರಿಸಿದ ಹೊಸ ಕೃಷಿ ಉದ್ಯಮವು ಪಟಿದಾರರ ಭದ್ರ ನೆಲೆಯಾಗಿ ಬೆಳೆಯಲು ಖಚಿತಪಡಿಸಿತು. ಇದು ಸದಾ ಹೆಚ್ಚುತ್ತಲೇ ಹೋದ ಕಬ್ಬು ಸಂಸ್ಕರಿಸುವ ಕಾರ್ಖಾನೆಗಳಿಗೆ ವಿಶೇಷವಾಗಿ ಅನ್ವಯಿಸುತ್ತದೆ. ಈ ಉದ್ಯಮಗಳಿಗೆ ಅಗತ್ಯವಾಗಿ ಬೇಕಾದ ಬಂಡವಾಳವನ್ನು ಶ್ರೀಮಂತ ರೈತರೇ ಸಂಗ್ರಹಿಸಿದಿದ್ದರೂ, ಸರ್ಕಾರ ಉದಾರವಾಗಿ ಅನುದಾನ ಹಾಗೂ ಸಾಲ ನೀಡಿ ಪ್ರೋತ್ಸಾಹಿಸಿತು. ಸಹಕಾರ ಸಂಘದಲ್ಲಿ ಶೇರು ಖರೀದಿಸಿದ ಬೆಳೆಗಾರ ತಾನು ಬೆಳೆದ ಕಬ್ಬನ್ನು ಕಾರ್ಖಾನೆಗೆ ಮಾರುವ ಹಕ್ಕು ಹೊಂದಿರುತ್ತಿದ್ದ. ಕಾರ್ಖಾನೆಯು ನಗದು ಮುಂಗಡ ಮತ್ತು ಬೀಜ, ಗೊಬ್ಬರ ಮತ್ತು ಸಲಕರಣೆಗಳೊಂದಿಗೆ ಕೃಷಿ ವಿಸ್ತರಣೆ ಸೇವೆಗಳಂತಹ ಸೌಲಭ್ಯಗಳನ್ನು ಒದಗಿಸುತ್ತಿದ್ದು, ಅದು ಕೃಷಿ ಉತ್ಪಾದನೆಯಲ್ಲಿ ಖಾಸಗಿ ಉದ್ಯಮಿಯಾಗಿ ಭೂ ಮಾಲೀಕನನ್ನು ದೂರಮಾಡದೆಯೇ ವ್ಯವಸ್ಥಾಪಕ ಹಸ್ತಕ್ಷೇಪವು ಇದ್ದಿತೆಂದು ಸೂಚಿಸುತ್ತದೆ. ಬೆಳೆ ಕುರಿತ ಎಲ್ಲ ನಿರ್ಧಾರಗಳನ್ನು ರೈತರೇ ತೆಗೆದುಕೊಳ್ಳುತ್ತಾರೆ, ಅದರೆ ಹಾಗೆ ಮಾಡಲು ಸಹಕಾರ ಸಂಘವು ತನ್ನ ಸದಸ್ಯರಿಗೆ ಉದಾರವಾಗಿ ಲಭ್ಯವಾಗಿಸುವ ಎಲ್ಲ ಸೌಲಭ್ಯಗಳನ್ನು ಪಡೆಯಬಹುದು ಎನ್ನುವ ಭರವಸೆ ಅವರಿಗೆ ಇದೆ. ಪ್ರತಿಯೊಂದು ಕಾರ್ಖಾನೆಯೂ ಕೃಷಿ ಸಿಬ್ಬಂದಿಯೊಬ್ಬನನ್ನು ನೇಮಿಸಿಕೊಂಡಿದ್ದು, ಉತ್ಪಾದನೆ

ಹಾಗೂ ಉತ್ಪಾದಕತೆಯ ಹೆಚ್ಚಳ ಆತನ ಗುರಿಯಾಗಿತ್ತು. ಹೊಸ ಬೀಜ ಪ್ರಭೇದಗಳು ಮತ್ತು ಸಸಿ ನೆಡುವಿಕೆ ತಂತ್ರಗಳನ್ನು ಬಳಸಿ ಪ್ರಯೋಗ ಕೈಗೊಳ್ಳಬಲ್ಲ ಪ್ರಗತಿಪರ ರೈತರನ್ನು ಗುರುತಿಸುವುದು; ಹೊಸ ವಿಧಾನಗಳ ಚರ್ಚೆಗೆ ಸಭೆ ಆಯೋಜಿಸುವುದು; ನೆರೆಯ ಮಹಾರಾಷ್ಟ್ರದ ಹೆಚ್ಚು ಸುಧಾರಿತ ಉತ್ಪಾದನಾ ಪ್ರದೇಶಗಳಿಗೆ ಪ್ರವಾಸ ಏರ್ಪಡಿಸುವುದು ಇತ್ಯಾದಿ ಮೂಲಕ ಇದನ್ನು ಮಾಡಲಾಗುತ್ತಿತ್ತು. ಇದರ ಪರಿಣಾಮವಾಗಿ ಇಳುವರಿ ಗಮನಾರ್ಹವಾಗಿ ಹೆಚ್ಚಳಗೊಂಡು, ಪ್ರಸ್ತುತ ಎಕರೆಗೆ 40 ಟನ್‌ಗಿಂತಲೂ ಹೆಚ್ಚಿನ ಪ್ರಮಾಣವನ್ನು ಮುಟ್ಟಿದೆ. ನನ್ನ ಸಂಶೋಧನೆಯ ಪ್ರಕಾರ, ಉತ್ಪಾದನೆಯ ವೆಚ್ಚ ಹೆಚ್ಚಿದ್ದರೂ, ಸಹಕಾರ ಸಂಘದ ಸದಸ್ಯರು ಪಡೆದುಕೊಂಡ ಕಬ್ಬಿನ ದರಕ್ಕೆ ಹೋಲಿಸಿದರೆ ಅದು ಹೆಚ್ಚೇನೂ ಅಲ್ಲ. ಇದು 1989ರಲ್ಲಿ ಟನ್ ಒಂದಕ್ಕೆ ದರ 430 ರೂ. ಇತ್ತು. ಪ್ರಾಂತ್ಯದ ಅತ್ಯಂತ ಹಳೆಯ ಸಕ್ಕರೆ ಕಾರ್ಖಾನೆಯ 500 ರೂ. ಶೇರ್ನ ಮೌಲ್ಯ 1989ರ ಆರಂಭದಲ್ಲಿ ಸುಮಾರು 50,000 ರೂ. ಅಥವಾ ಅದಕ್ಕಿಂತಲೂ ಅಧಿಕವಾಗಿತ್ತು. ಕಬ್ಬಿನ ಬೆಳೆಯಿಂದ ಈ ರೈತ ಬಂಡವಾಳಶಾಹಿಗಳು ಗಳಿಸುತ್ತಿದ್ದ ಅಪಾರ ಲಾಭವನ್ನು ತೋರಿಸಲು ಇದಕ್ಕಿಂತ ಉತ್ತಮ ಉದಾಹರಣೆ ಬೇರೆ ಬೇಡ.

ಪ್ರಬಲ ಭೂಮಾಲೀಕ ಜಾತಿ-ವರ್ಗದ ಏಳಿಗೆಯು ಕಣ್ಣಿಗೆ ಕಾಣುವಂತೆಯೇ ಹೆಚ್ಚಳಗೊಂಡಿದೆ. ಸಾಕಷ್ಟು ಸಂಖ್ಯೆಯ ಶ್ರೀಮಂತ ಕುಟುಂಬಗಳು ಈ ಹಿಂದೆ ವಾಸಿಸುತ್ತಿದ್ದ ತಮ್ಮ ಸರಳವಾದ ಮನೆಗಳನ್ನು ಎರಡು ಇಲ್ಲವೇ ಮೂರು ಅಂತಸ್ತಿನ ದೊಡ್ಡ ಬಂಗಲೆಗೆ ಬದಲಿಸಿದ್ದಾರೆ. ಚದರಬಿಲ್ಲೆ ಅಳವಡಿಸಿದ ನೆಲ, ಆಧುನಿಕ ನೈರ್ಮಲ್ಯ, ನಗರದಲ್ಲಿ ತಯಾರಿಸಿದ ಪೀಠೋಪಕರಣ, ರೆಫ್ರಿಜರೇಟರ್ ಗಳು, ಸ್ಟೇನ್‌ಲೆಸ್ ಸ್ಟೀಲ್ ಅಡುಗೆ ಪಾತ್ರೆಗಳು, ಟೆಲಿವಿಷನ್, ವಿಡಿಯೋ ಕ್ಯಾಸೆಟ್ ರೆಕಾರ್ಡರ್ ಗಳು ಮತ್ತು ಕೊನೆಯ ಆದರೆ ಕನಿಷ್ಠವಲ್ಲದ್ದೆಂದರೆ, ಎಲ್ಲರ ಮನೆ ಬಾಗಿಲಿನಲ್ಲಿ ಮೋಟರ್ ಬೈಕ್ ಇಲ್ಲವೇ ಸ್ಕೂಟರ್. ಇವೆಲ್ಲವೂ ಗ್ರಾಮೀಣ ಶ್ರೀಮಂತರ ಆರಾಮದಾಯಕ ಬದುಕನ್ನು ಎತ್ತಿ ತೋರಿಸುತ್ತವೆ. ಹೆಚ್ಚು ಪ್ರಮಾಣದ ಹಾಗೂ ಗುಣಮಟ್ಟದ ಗ್ರಾಹಕ ವಸ್ತುಗಳ ಜೊತೆಗೆ ಈವರೆಗೆ ನಗರಗಳಲ್ಲಿನ ಶ್ರೀಮಂತರಿಗೆ ಮಾತ್ರ ಲಭ್ಯವಾಗುತ್ತಿದ್ದ ವೈವಿಧ್ಯಮಯ ಆಹಾರ ಮತ್ತು ಇನ್ನಿತರ ದಿನನಿತ್ಯದ ವಸ್ತುಗಳ ಬಳಕೆಯ ಶ್ರೀಮಂತ ಜೀವನಶೈಲಿಯು ಅವರ ಸಾಧನೆಯನ್ನು ವಿವರಿಸುತ್ತದೆ. ಇದರಷ್ಟೇ ಸಮಾನವಾಗಿ ಪರಿಗಣಿಸಬೇಕಾದ್ದು, ಕೃಷಿ ಕೆಲಸದಲ್ಲಿ ಇಂಥ ಕುಟುಂಬದವರ ಪಾಲ್ಗೊಳ್ಳುವಿಕೆ ಕಡಮೆಯಾದದ್ದು. ಮನೆ ಹೊರಗಿನ ಕೆಲಸದಲ್ಲಿ ಮಹಿಳೆಯರ ಪಾಲ್ಗೊಳ್ಳುವಿಕೆ ಕಡಮೆಯಾಗಿದ್ದು ಸೇರಿದಂತೆ, ಆರ್ಥಿಕ ಪ್ರಕ್ರಿಯೆಗಳಲ್ಲಿ ಮಹಿಳೆಯರು ಮತ್ತು ಮಕ್ಕಳು ಕ್ರಮೇಣ ಮೂಲೆಗುಂಪಾದರು. ಪರಿಸ್ಥಿತಿ ಯಾವ ಹಂತ ತಲುಪಿತೆಂದರೆ, ಮುಖ್ಯ ಭೂ ಮಾಲೀಕ ಜಾತಿಗಳ ಪುರುಷರು ಕೃಷಿ ಕೆಲಸದಿಂದ ತಪ್ಪಿಸಿಕೊಳ್ಳತೊಡಗಿದರು ಮತ್ತು ನೇಮಿಸಿಕೊಂಡ ಕುಟುಂಬೇತರ ಕಾರ್ಮಿಕರ ಕೆಲಸದ ಮೇಲುಸ್ತುವಾರಿಗೆ ತಮ್ಮನ್ನು ಸೀಮಿತಗೊಳಿಸಿಕೊಂಡರು.

ಇದೆಲ್ಲದರಿಂದ ಪಟಿದಾರರು ಕೃಷಿಯನ್ನು ಒಂದು ವೃತ್ತಿಯಾಗಿ ತ್ಯಜಿಸಲು ಸಿದ್ಧರಿದ್ದಾರೆ ಎಂಬ ತೀರ್ಮಾನಕ್ಕೆ ಬರುವುದು ತಪ್ಪಾಗುತ್ತದೆ. ಇಂಥ ತೀರ್ಮಾನವು ಈ ವ್ಯಾಪಾರಿ ವರ್ಗದ ಹೂಡಿಕೆ ವರ್ತನೆಗೆ ತದ್ವಿರುದ್ಧವಾಗಿರುತ್ತದೆ. ಕೃಷಿ ಸಂಪನ್ಮೂಲಗಳ ಆದಾಯದ ಬಹುತೇಕ ಪಾಲನ್ನು ಅವರು ತಮ್ಮ ಭೂಮಿಯ ಮೌಲ್ಯವರ್ಧನೆ,

ಆಧುನೀಕರಿಸಲು ಹಾಗೂ ಬಂಡವಾಳ ಕ್ರೋಢೀಕರಣಕ್ಕೆ ಬಳಸುತ್ತಿದ್ದಾರೆ. ಜತೆಗೆ, ತಮ್ಮ ಲಾಭಕ್ಕಾಗಿ ಕೃಷಿಯೇತರ ಅವಕಾಶಗಳನ್ನು ಅನ್ವೇಷಿಸುತ್ತಾರೆ. ತಮ್ಮ ಮುಂದಿನ ಪೀಳಿಗೆ ಹಾಲಿ ಸಂಪತ್ತನ್ನು ಉಳಿಸಿಕೊಳ್ಳಬೇಕು ಹಾಗೂ ಇನ್ನಷ್ಟು ಹೆಚ್ಚಿಸಿಕೊಳ್ಳಲು ಹೊಸ ಸಂಪತ್ತಿನ ಮೂಲಗಳನ್ನು ಕಂಡುಕೊಳ್ಳಬೇಕು ಎನ್ನುವ ಅವರ ಆತಂಕವು ಈ ವೈವಿಧ್ಯೀಕರಣದ ಅಗತ್ಯತೆಗೆ ಕಾರಣವಾಗಿದೆ. ಇದಕ್ಕೆ ತಮ್ಮ ಗಂಡು ಮಕ್ಕಳನ್ನು ಸಿದ್ಧಗೊಳಿಸಲು ಅವರನ್ನು ಕಾಲೇಜಿಗೆ ಕಳಿಸುತ್ತಾರೆ. ವಿಜ್ಞಾನ ಇಲ್ಲವೇ ವಾಣಿಜ್ಯ ವಿಷಯದಲ್ಲಿ ಪದವಿ ಗಳಿಸಿದ ಮಕ್ಕಳನ್ನು ಯಾವುದಾದರೊಂದು ಕಸುಬು ಕಲಿಯಲು ಅಥವಾ ವೃತ್ತಿಯೊಂದನ್ನು ಕೈಗೊಳ್ಳಲು ಕಳಿಸಲಾಗುತ್ತದೆ. ಅವರು ಸ್ವಂತ ಉದ್ಯೋಗ ಇಲ್ಲವೇ ಇನ್ನೂ ಮಿಗಿಲಾಗಿ ಸಣ್ಣ ಕೈಗಾರಿಕೆ ಅಥವಾ ವ್ಯಾಪಾರ ಸಂಸ್ಥೆಯ ಮಾಲೀಕರಾಗಲಿ ಎನ್ನುವುದು ಇದರ ಉದ್ದೇಶವಾಗಿರುತ್ತದೆ. ಈ ಪ್ರಬಲ ಜಾತಿಗಳಿಗೆ ಸೇರಿದ ಮಹಿಳೆಯರು ಎರಡು ಗಂಡು ಮಕ್ಕಳನ್ನು - ಇವರಲ್ಲಿ ಒಬ್ಬ ಮಗ ಕೃಷಿಯಲ್ಲಿ ತೊಡಗಿಕೊಳ್ಳುತ್ತಾನೆ - ಮತ್ತು ಸಮಾನ ಸಾಮಾಜಿಕ ವರ್ಗದ ಅರ್ಹ ವರರು ಕೇಳುವ ದುಬಾರಿ ವರದಕ್ಷಿಣೆ ಮತ್ತು ವಿವಾಹ ವೆಚ್ಚವನ್ನು ತಪ್ಪಿಸುವ ಭರವಸೆಯಿಂದ ಸಾಧ್ಯವಿರುವಷ್ಟು ಕಡಮೆ ಹೆಣ್ಣು ಮಕ್ಕಳನ್ನು ಹುಟ್ಟಿಸಿಕೊಂಡ ಬಳಿಕ ಅನೇಕ ವೇಳೆ ಸಂತಾನಹರಣ (sterilisation) ದ ಮೂಲಕ ಮಕ್ಕಳಿಗೆ ಮಿತಿ ವಿಧಿಸಿಕೊಳ್ಳುತ್ತಾರೆ. ಜನಸಂಖ್ಯೆ ಹೆಚ್ಚಳದಲ್ಲಿ ಪಟಿದಾರರ ಪಾಲು ಮಿತವಾಗಿರಲು ಇಂಥ ಸಾಂಪ್ರದಾಯಿಕ ಜನಸಂಖ್ಯಾ ಕಾರ್ಯತಂತ್ರ ಕಾರಣ.

ಗ್ರಾಮೀಣ ಪ್ರದೇಶದ ಹೆಚ್ಚುವರಿ ಆದಾಯವನ್ನು ಭಾಗಶಃ ಬರಿದುಮಾಡಿ ಮತ್ತು ನಗರದ ಬಂಡವಾಳವಾಗಿ ಪರಿವರ್ತಿಸಲಾಗುತ್ತಿದೆ. ಆದರೆ, ಇದರರ್ಥ ರೈತ ಉದ್ಯಮಿಗಳು ಈ ಹೂಡಿಕೆಯ ಮೇಲೆ ನಿಯಂತ್ರಣ ಕಳೆದುಕೊಂಡಿದ್ದಾರೆ ಎಂದಲ್ಲ. ಮಿಗತೆ ಹಣವು ಸಣ್ಣ ಪ್ರಮಾಣದ ಉದ್ಯಮಿ ಇಲ್ಲವೇ ವ್ಯಾಪಾರಿಗಳಾಗಲು ಇಲ್ಲವೇ ಕಾರ್ಯಾಗಾರವೊಂದನ್ನು ತೆರೆಯುವ ಮೂಲಕ ನಗರಗಳಲ್ಲಿ ನೆಲೆಯೂರಲು ಪ್ರಯತ್ನಿಸುತ್ತಿರುವ ಪಟಿದಾರರ ಯುವ ಪೀಳಿಗೆಯಿಂದ ನಗರದಲ್ಲಿ ಬಳಸಲಾಗುತ್ತಿದೆ. ಗ್ರಾಮೀಣದ ಬಂಡವಾಳವು ಬರಿದಾಗಿ ನಗರದ ಆರ್ಥಿಕತೆಯ ಕಡೆಗೆ ಚಲಿಸುವ ಪ್ರಕ್ರಿಯೆಯು ಮೊದಲ ನೋಟಕ್ಕೆ ಮೈಕಲ್ ಲಿಪ್ಟನ್ (Michel Lipton) ಅವರ ಪಟ್ಟಣಗಳು ಹಾಗೂ ಗ್ರಾಮಗಳ ಅಸಮಾನ ಅಭಿವೃದ್ಧಿ ಮಾದರಿ ಸಿದ್ಧಾಂತವನ್ನು ಸಮರ್ಥಿಸುತ್ತದೆ ಎನ್ನಿಸಬಹುದಾದರೂ (Lipton (ಲಿಪ್ಟನ್), 1977), ಹಣದ ಹರಿವಿನ ದಿಕ್ಕು ಸಾಮಾಜಿಕ ಬಲಗಳ ಸಮತೋಲನದ ಹೆಚ್ಚು ಗಂಭೀರ ರೂಪಾಂತರದ ಒಂದು ಆಯಾಮ ಮಾತ್ರವಷ್ಟೇ. ಇದು ಕಾಲಕ್ರಮೇಣ ಗ್ರಾಮೀಣ ಮತ್ತು ನಗರದ ಮಧ್ಯಮ ವರ್ಗದ ಭಾಗಗಳ ನಡುವೆ ಹೊಸ ವರ್ಗ ಮೈತ್ರಿಗೆ ಕಾರಣವಾಯಿತು ಎಂದು ನಾನು ವಾದಿಸುತ್ತೇನೆ.

ಆರ್ಥಿಕ ಅಭಿವೃದ್ಧಿಯು ಪಟಿದಾರರ ಸ್ವಪ್ರತಿಷ್ಠೆಯನ್ನೂ ಹೆಚ್ಚಿಸಿತು. ಭೂಮಿಪುತ್ರ *(bhumiputra sons of the soil)* ರೆಂದು ಕರೆಸಿಕೊಳ್ಳುವ ಅವರು ಪ್ರಗತಿ ಸಾಧಿಸಲು ತಮ್ಮ ಗ್ರಾಮೀಣ ಹಿನ್ನೆಲೆಯು ತಡೆಯಾಗಿರಲಿಲ್ಲ ಎನ್ನುವುದಕ್ಕೆ ಉದಾಹರಣೆಯಾಗಿದ್ದಾರೆ. ಆದಾಗ್ಯೂ, ಚಟುವಟಿಕೆಯ ಪ್ರಮಾಣದಲ್ಲಿ ಹೆಚ್ಚಳ ಮತ್ತು ಅವರ ಪ್ರಭಾವ ವಲಯದ ವಿಸ್ತರಣೆಯಿಂದಾಗಿ, ಗ್ರಾಮಗಳು ಅವರ ಪಾಲಿಗೆ ಈಗ ಇನ್ನಷ್ಟು ವಿಸ್ತಾರವಾದ ಕ್ರಿಯೆಗೆ ದಾರಿ ಮಾಡಿಕೊಡುವ ವೇದಿಕೆಗಳಷ್ಟೆ. ಪಟಿದಾರರು ಜಿಲ್ಲಾ ಮಟ್ಟದಲ್ಲಿ ಮತ್ತು ಅದಕ್ಕಿಂತ ಹೆಚ್ಚಿನ ಹಂತದ ಸಾಂಸ್ಥಿಕ

ಮೂಲಸೌಕರ್ಯಗಳನ್ನು ನಿಯಂತ್ರಿಸುತ್ತಾರೆ. ಆರ್ಥಿಕ, ರಾಜಕೀಯ ಹಾಗೂ ಸಾಮಾಜಿಕ ವಹಿವಾಟಿನ ಎಲ್ಲ ಪ್ರಮುಖ ಸ್ಥಳಗಳಲ್ಲಿ ಅವರು ಎದುರಾಗುತ್ತಾರೆ. ಈ ಅಲ್ಪಸಂಖ್ಯಾತರಿಗೆ ಅನೇಕ ಕ್ಷೇತ್ರಗಳಲ್ಲಿ ತಮ್ಮ ಅಧಿಕಾರ ಚಲಾಯಿಸುವುದು ಒಗ್ಗಿಹೋಗಿದೆ. ಈ ಪ್ರಾಂತ್ಯದ ಸಾರ್ವಜನಿಕ ಕ್ಷೇತ್ರದಲ್ಲಿ ಅವರ ಪ್ರಭವವು ಹೆಚ್ಚು ಗೋಚರಿಸುತ್ತದೆ: ಕೈಗಾರಿಕೆಗಳು ಮತ್ತು ಕೃಷಿ ಸಹಕಾರ ಸಂಘಗಳು ಅವರ ಜಾತಿಯ ಹೆಸರಿನಲ್ಲಿವೆ; ನಾನಾ ರಾಜಕೀಯ ಪಕ್ಷಗಳ ಸ್ಥಳೀಯ ಘಟಕಗಳನ್ನು ಅವರು ನಿರ್ವಹಿಸುತ್ತಾರೆ; ಶಾಲೆ ಮತ್ತು ಸಂಸ್ಥೆಗಳ ಆಡಳಿತ ಮಂಡಳಿಯಲ್ಲಿ ಅವರು ಸೇವೆ ಸಲ್ಲಿಸುತ್ತಾರೆ. ಎಲ್ಲ ದೃಷ್ಟಿಯಿಂದಲೂ ಈ ಬಯಲು ಪ್ರದೇಶವನ್ನು ಪಟಿದಾರರ ನಾಡು ಎಂದು ಹೇಳಬಹುದು.

ಪಶ್ಚಿಮ ಭಾರತದ ಸಹಕಾರ ಚಳವಳಿಯ ಮುಂದುವರಿಕೆಗೆ ಕಾರಣವಾದ ಜಾತಿ ಐಕಮತ್ಯವು ರಾಜಕೀಯ ಕ್ರಿಯೆಗೂ ಬುನಾದಿಯಾಗಿದೆ. 1920ರ ದಶಕದಲ್ಲಿ ಪಟಿದಾರರು ಬ್ರಿಟಿಷ್ ವಸಾಹತುಶಾಹಿ ಅಧಿಕಾರಿಗಳ ತೆರಿಗೆ ಹೆಚ್ಚಳದ ಪ್ರಯತ್ನವನ್ನು ಯಶಸ್ವಿಯಾಗಿ ನಿಗ್ರಹಿಸಿದ್ದರು. ಸ್ವಾತಂತ್ರ್ಯಾನಂತರ ಈ ಭೂ ಮಾಲೀಕ ಜಾತಿಗಳ ಸಾಮಾಜಿಕ ಪ್ರಗತಿ ಮುಂದುವರಿದಂತೆ, ಅವು ರಾಜ್ಯ ಮತ್ತು ಅಧಿಕಾರಶಾಹಿಯ ಬಗೆ ಇದ್ದ ಟೀಕೆಯನ್ನು ಕಡಮೆಗೊಳಿಸಲಿಲ್ಲ. ಸೂರತ್ ಜಿಲ್ಲೆಯ ಹೆಚ್ಚು ಸಂಖ್ಯೆ ಪಟಿದಾರರನ್ನು ಒಳಗೊಂಡ ರೈತ ಉತ್ಪಾದಕರ ಒಂದು ಪಕ್ಷೇತರ ರಾಜಕೀಯ ಒಕ್ಕೂಟ ಖೇದುತ್ ಸಮಾಜ (*Khedut Sama)*ದ ಮೂಲಕ ತಮ್ಮ ಅಸಮಾಧಾನವನ್ನು ವ್ಯಕ್ತಪಡಿಸುತ್ತಾರೆ. ಈ ಸಾಮಾಜಿಕ ಪರಿಸರದಲ್ಲಿ ಪ್ರಚಲಿತದಲ್ಲಿರುವ ಸಾರ್ವಜನಿಕರ ಅಭಿಪ್ರಾಯದ ಪ್ರಕಾರ, ರಾಜ್ಯದ ಅಧಿಕಾರವು ದೀರ್ಘ ಕಾಲದಿಂದ ಪಕ್ಷ ರಾಜಕಾರಣಿಗಳು ಹಾಗೂ ಅಧಿಕಾರಶಾಹಿ ಕಾರ್ಯನೀತಿ ನಿರೂಪಕರ ಕೈಯಲ್ಲಿದ್ದು, ಅವರೆಲ್ಲರೂ ಕೈಗಾರಿಕೆ-ನಗರಗಳ ಹಿತಾಸಕ್ತಿ ಪರವಾಗಿದ್ದಾರೆ ಎನ್ನುವುದಾಗಿತ್ತು. ಶ್ರೀಮಂತ ರೈತರಿಗೆ ನಿಷ್ಠವಾದ ನಾಯಕತ್ವವು ಭೂ ಮಾಲೀಕರು ಹಾಗೂ ಭೂರಹಿತರ ಏಕತೆಗೆ ಒತ್ತು ನೀಡುತ್ತದಾದರೂ, ಗ್ರಾಮೀಣ ಸಮಾಜದಲ್ಲಿನ ತೀವ್ರ ವೈದೃಶ್ಯಗಳನ್ನು ಅದು ಮುಚ್ಚಿಹಾಕುತ್ತದೆ. ಪ್ರಸ್ತುತ ಅಧಿಕಾರದ ಸಮತೋಲನ ಹಳ್ಳಿಗಾಡಿನ ಕಡೆಗೆ ವಾಲಿದ್ದುದ್ದರಿಂದ ಹಿತಾಸಕ್ತಿಗಳ ಕ್ಷೇತ್ರದ ವಿಭಾಗದಲ್ಲಿ ಬದಲಾವಣೆಗಳು ಆಗಿದ್ದರೂ, ಸಾಮಾಜಿಕ ತಾರತಮ್ಯ ಮೊದಲಿನಂತೆಯೇ ಉಳಿದುಕೊಂಡಿದೆ.

## ಭೂರಹಿತ ಅಸ್ತಿತ್ವ, ಹಿಂದೆ ಮತ್ತು ಇಂದು

ಸೂರತ್ ಜಿಲ್ಲೆಯ ನಾನಾ ವರ್ಗಗಳ ಜಮೀನುದಾರರ ಸಂಖ್ಯೆಗಿಂತ ಗ್ರಾಮೀಣ ಕಾರ್ಮಿಕ ವರ್ಗದವರ ಸಂಖ್ಯೆ, ಪ್ರತ್ಯೇಕವಾಗಿ ಅಥವಾ ಒಟ್ಟಾಗಿ, ಹೆಚ್ಚು ಇದೆ. 1981ರ ಜನಗಣತಿ ಪ್ರಕಾರ, ಕೃಷಿಕರ ಜನಸಂಖ್ಯೆಯಲ್ಲಿ ಭೂರಹಿತರ ಪ್ರಮಾಣ ಶೇ.54.5 ಮತ್ತು ಭಾರಿ ಜನದಟ್ಟಣೆಯ ಬಯಲಿನ ಕೇಂದ್ರ ಭಾಗದಲ್ಲಿ ಅವರ ಸಂಖ್ಯೆಯು ಇನ್ನಷ್ಟು ಹೆಚ್ಚು ಇದೆ. ದಕ್ಷಿಣ ಗುಜರಾತಿನಲ್ಲಿ ಕೃಷಿ ಕಾರ್ಮಿಕರ ಕೇಂದ್ರೀಕರಣವು ಹೆಚ್ಚು ಇದೆ ಎಂದು ಗುರುತಿಸಿದ್ದರೂ, ರಾಜ್ಯದ ಬೇರೆ ಭಾಗಗಳಲ್ಲಿ ಭೂ ಮಾಲೀಕರ ಅನುಪಾತ ಕಡಮೆಯಾಗುತ್ತಿದೆ. ಇಡೀ ಗುಜರಾತಿನಲ್ಲಿ 1961ರಲ್ಲಿ 1.24 ಭೂ ಮಾಲೀಕರಿಗೆ ಒಬ್ಬ ಭೂರಹಿತ ಕಾರ್ಮಿಕನಿದ್ದರೆ, 1981ರಲ್ಲಿ ಈ ಅನುಪಾತ 0.84ಕ್ಕೆ ಕುಸಿದಿತ್ತು.

ಕೃಷಿ ಸಮುದಾಯದ ಕಾರ್ಮಿಕೀಕರಣದ ಹೆಚ್ಚಳಕ್ಕೆ ಯಾವ ಕಾರ್ಯವಿಧಾನಗಳು ಕಾರಣವಾಗಿವೆ? ಇಂಥ ಪ್ರವೃತ್ತಿಯನ್ನು ಬಂಡವಾಳಶಾಹಿ ಮಾದರಿಯ ಅಭಿವೃದ್ಧಿಗೆ ಸಂಬಂಧಿಸುವುದು ಸ್ವಾಭಾವಿಕ. ಒಂದು ಪರಿಚಿತ ವ್ಯಾಖ್ಯಾನವೆಂದರೆ, ವರ್ಗಗಳ ಅನುಸಾರ ಪುನರ್ವಿನ್ಯಾಸದಿಂದ ಶ್ರೇಣಿಯ ಮೇಲ್ಮಟ್ಟದಲ್ಲಿರುವವರಲ್ಲಿ ಕೃಷಿ ಭೂಮಿಯು ಶೇಕರಣೆಗೊಳ್ಳುತ್ತದೆ ಮತ್ತು ಹೆಚ್ಚು ಪ್ರಮಾಣದ ಸಣ್ಣ ರೈತರು ತಮ್ಮ ಆಸ್ತಿಯನ್ನು ಕಳೆದುಕೊಂಡು, ಕೆಳ ಹಂತಕ್ಕೆ ಕುಸಿದು ಭೂರಹಿತ ಅಸ್ತಿತ್ವ ಪಡೆದುಕೊಳ್ಳುತ್ತಾರೆ ಎನ್ನುವುದು. ಆದಾಗ್ಯೂ, ಇಂಥ ಇಬ್ಬಗೆಯ ವಿಭಜನೆ ವಾಸ್ತವದಲ್ಲಿ, ಬಂಡವಾಳಶಾಹಿ ಗುಣಲಕ್ಷಣಗಳು ಉತ್ಪಾದನಾ ಸಂಬಂಧಗಳೊಂದಿಗೆ ವ್ಯಾಪ್ತತೆ ಹೊಂದಿರುವ ಪ್ರಾಂತ್ಯದಲ್ಲಿ ಕೂಡ ಇರುವುದಿಲ್ಲ ಎಂದು ನಾನು ನಂಬುತ್ತೇನೆ. ಉದಾಹರಣೆಗೆ, ನನ್ನ ಕ್ಷೇತ್ರಕಾರ್ಯ ನಡೆದ ಪ್ರದೇಶದಲ್ಲಿ ಮಧ್ಯಮ ಹಾಗೂ ಸಣ್ಣ ಹಿಡುವಳಿಗಳು (ಅನುಕ್ರಮವಾಗಿ 4 ರಿಂದ 8 ಎಕರೆ ಮತ್ತು 4 ಎಕರೆಗಿಂತ ಕಡಮೆ) ಉಳಿದುಕೊಂಡಿವೆ. ಸಾಮಾಜಿಕ ಶ್ರೇಣಿಯಲ್ಲಿ ಅವರ ಹಿಂಜರಿತವನ್ನು ತಪ್ಪಿಸಲು ಸಣ್ಣ ರೈತ ಕುಟುಂಬಗಳು ಅಳವಡಿಸಿಕೊಂಡಿರುವ ಕಾರ್ಯತಂತ್ರದ ವೈಶಿಷ್ಟ್ಯವೆಂದರೆ, ಒಂದೆಡೆ ಉತ್ಪಾದನೆಯನ್ನು ಹೆಚ್ಚಿಸುವುದು ಮತ್ತು ಇನ್ನೊಂದೆಡೆ ಕೃಷಿಯೇತರ ಉದ್ಯೋಗಗಳ ಮೂಲಕ ಕುಟುಂಬದ ಆದಾಯಕ್ಕೆ ಪೂರಕ ಕೆಲಸ ಮಾಡುವುದು; ಗ್ರಾಮೀಣ ಆರ್ಥಿಕತೆಯ ವೈವಿಧ್ಯೀಕರಣವು ಅಂಥ ಹಲವು ಅವಕಾಶಗಳನ್ನು ಸೃಷ್ಟಿಸಿದೆ. ವಿಶೇಷವಾಗಿ, ಸಣ್ಣ ರೈತರಿಗೆ ಸಂಬಂಧಿಸಿದಂತೆ ಮುಂದಿನ ಪೀಳಿಗೆಗೆ ಜಮೀನನ್ನು ಉಳಿಸಬೇಕೆನ್ನುವ ಪ್ರಯತ್ನವು ಭಾರಿ ಶೋಷಣಾತ್ಮಕವಾಗಿರುತ್ತದೆ - ಕಡಮೆ ವೇತನಕ್ಕೆ ದೀರ್ಘಕಾಲ ಕೆಲಸ ಮತ್ತು ಕೆಲಸದಲ್ಲಿ ಕುಟುಂಬದ ಸದಸ್ಯರೆಲ್ಲರ ಗರಿಷ್ಠ ಪಾಲ್ಗೊಳ್ಳುವಿಕೆ. ಆದರೆ, ಈ ಕಾರ್ಯತಂತ್ರವು ಕೆಲವು ಯುವಜನರನ್ನು ಭೂರಹಿತ ಅಸ್ತಿತ್ವದ ಕಡೆಗೆ ತಳ್ಳುವುದನ್ನು ಮತ್ತು ತಮ್ಮ ಅಧೋಗತಿಯ ಚಲನೆಯನ್ನು ಮುಚ್ಚಿಕೊಳ್ಳಲು ಅವರನ್ನು ಹುಟ್ಟಿದ ಗ್ರಾಮದಿಂದ ದೂರ ಕಳಿಸುವುದನ್ನೂ ಒಳಗೊಂಡಿರುತ್ತದೆ. ಬೇರೆ ರೀತಿ ಹೇಳಬೇಕೆಂದರೆ, ಕಾರ್ಮಿಕೀಕರಣದ ಪ್ರಕ್ರಿಯೆಯು ಸಂಪನ್ಮೂಲರಹಿತ-ಬಡ ಕೃಷಿ ಕುಟುಂಬಗಳಿಂದ ಅಧಿಕ ಸದಸ್ಯರನ್ನು ಹೊರದೂಡುವ ಮೂಲಕ ಉತ್ತೇಜಿಸಲ್ಪಡುತ್ತದೆ. ಆದರೆ, ಇಂಥ ಹೊರದೂಡುವಿಕೆಯು ಭೂಮಿಯ ಮಾಲೀಕತ್ವದ ಮಾದರಿಯ ಯಾವುದೇ ಗಂಭೀರ ರೂಪಾಂತರಕ್ಕೆ ಕಾರಣವಾಗುವುದಿಲ್ಲ.

ದಕ್ಷಿಣ ಗುಜರಾತಿನ ಬಯಲು ಪ್ರದೇಶದ ಭೂರಹಿತರಲ್ಲಿ ಹೆಚ್ಚಿನ ಮಂದಿ ಆದಿವಾಸಿ ಜಾತಿಯಾದ ಹಲ್ಪತಿಗೆ ಸೇರಿದವರಾಗಿದ್ದು, ಹಲವು ದಶಕಗಳ ಹಿಂದೆ ಅವರ ಪೂರ್ವಜರಿಗೆ ಕೃಷಿ ಭೂಮಿಯನ್ನು ಹೊಂದುವ ಅವಕಾಶವನ್ನು ನಿರಾಕರಿಸಲಾಗಿತ್ತು. ಹೊಸ ಕೃಷಿ ಭೂಮಿಯನ್ನು ಮುಕ್ತಗೊಳಿಸುವಲ್ಲಿ ಅವರು ಪ್ರಮುಖ ಪಾತ್ರ ವಹಿಸಿದ್ದರು; ಇದು ಹಂತಹಂತವಾಗಿ ನಡೆದ ಪ್ರಕ್ರಿಯೆ ಆಗಿದ್ದು 20ನೇ ಶತಮಾನದ ಆರಂಭದಲ್ಲಿ ಮುಕ್ತಾಯವಾಯಿತು. ಆದರೆ, ಅವರ ಪಾತ್ರ ಭೂಮಾಲೀಕರ ಸೇವೆಯಲ್ಲಿ ಕಾರ್ಮಿಕರಾಗಿರುವುದಕ್ಕೆ ಮಾತ್ರ ಸೀಮಿತವಾಗಿತ್ತು. ಸೂರತ್ ಜಿಲ್ಲೆಯಲ್ಲಿ 1951ರಿಂದ 1981ರ ಅವಧಿಯಲ್ಲಿ ಭೂರಹಿತರ ಜನಸಂಖ್ಯೆ ದುಪ್ಪಟ್ಟಾಗಲು ಪ್ರಾಯಃ ಸಾಂಪ್ರದಾಯಿಕವಾಗಿ ಕೃಷಿ ಕಾರ್ಮಿಕರು ಸೇರಿದ ಜಾತಿಗಳ ಜನಸಂಖ್ಯೆ

ಅಸಮಾನವಾಗಿ ಹೆಚ್ಚಳಗೊಂಡಿದ್ದು ಕಾರಣವಿರಬಹುದೇ? ಕೃಷಿ ವ್ಯವಸ್ಥೆಯ ಮೂಲದ ಮೇಲೆ ಒತ್ತಡದ ಹೆಚ್ಚಳ ಎನ್ನುವ ಈ ಎರಡನೇ ವಿವರಣೆಯು ಉನ್ನತ ಅಂತಸ್ತಿನ ಸಾಮಾಜಿಕ ವರ್ಗಗಳಲ್ಲಿ ಪ್ರಚಲಿತದಲ್ಲಿರುವ ಅಭಿಪ್ರಾಯಕ್ಕೆ ಅನುಸಾರವಾಗಿದೆ. ಭೂರಹಿತರು ತಮ್ಮ ಕುಟುಂಬದ ಗಾತ್ರದ ಬಗ್ಗೆ ಯಾವುದೇ ನಿಗ್ರಹ ಹೊಂದಿರುವುದಿಲ್ಲ; ಮತ್ತು, ಅವರ ಜನಸಂಖ್ಯಾ ವರ್ತನೆಯನ್ನು ಪ್ರತಿಬಂಧಿಸಲು ಕಠಿಣ, ಕೆಲವೊಮ್ಮೆ ಕ್ರೂರ ಕ್ರಮಗಳನ್ನು ಕೈಗೊಳ್ಳಬೇಕಾಗುತ್ತದೆ ಎನ್ನುವುದು ವಾಡಿಕೆಯ ಹಳಸಲು ಮಾತು. ಆದಾಗ್ಯೂ, ದಕ್ಷಿಣ ಗುಜರಾತಿನ ಇನ್ನಿತರ ಜಾತಿಗಳಿಗಿಂತ ಭೂರಹಿತರೆಂದು ಗುರುತಿಸಲ್ಪಟ್ಟ ಹಲ್ಪತಿಗಳು, ಉಳಿದ ಗ್ರಾಮೀಣ ಜನಸಂಖ್ಯೆಗಿಂತ ಸ್ಪಷ್ಟವಾಗಿ ಅಧಿಕ ಜನನ ಪ್ರಮಾಣ ಹೊಂದಿರುತ್ತಾರೆ ಎನ್ನುವುದಕ್ಕೆ ಯಾವುದೇ ಆಧಾರಗಳಿಲ್ಲ. 1971ರಲ್ಲಿ ಬಾರ್ಡೋಲಿಯ ಸುತ್ತಮುತ್ತಲಿನ ಬಯಲು ಪ್ರದೇಶದ ಒಟ್ಟು ಜನಸಂಖ್ಯೆಯಲ್ಲಿ ಹಲ್ಪತಿಗಳು 1/3ರಷ್ಟಿದ್ದರು; ಇದು 20 ವರ್ಷದ ಹಿಂದೆ ಇದ್ದ ಜನಸಂಖ್ಯೆಗೆ ಸ್ವಲ್ಪ ಕಡಮೆ ಎನ್ನಬಹುದು. 1971ರ ಜನಗಣತಿ ಪ್ರಕಾರ, ಪ್ರಾಂತ್ಯದ ಕೃಷಿಕ ಜನಸಂಖ್ಯೆಯಲ್ಲಿ ನಾಲ್ವರಲ್ಲಿ ಮೂವರು ಭೂರಹಿತ ವರ್ಗಕ್ಕೆ ಸೇರಿದವರಾಗಿದ್ದರು. ಭೂ ಮಾಲೀಕರು ಹಾಗೂ ಕೃಷಿ ಕಾರ್ಮಿಕರ ಅನುಪಾತದ ವೇಗದ ಕುಸಿತವನ್ನು ಸ್ಥಳೀಯ ಕಾರ್ಮಿಕೀಕರಣ ಅಥವಾ ಕೆಲ ಸಾಮಾಜಿಕ ವರ್ಗಗಳ ಅಧಿಕ ಜನನ ಪ್ರಮಾಣಗಳು ವಿವರಿಸಲಾರವು. ಬದಲಾಗಿ, ಇದರ ವಿವರಣೆಯು ಸವೆದ ಪೋಷಕ-ಆಶ್ರಿತ ಬಂಧ ಹಾಗೂ ಬಂಡವಾಳಶಾಹಿ ಉತ್ಪಾದನೆಯ ಗ್ರಾಮೀಣ ಬೆಳವಣಿಗೆಯ ಕೇಂದ್ರಬಿಂದುವಿನ ಕಡೆಗೆ ದೇಶದ ದೂರ ಪ್ರದೇಶಗಳಿಂದ ಋತುಮಾನದ ವಲಸೆ ಕಾರ್ಮಿಕರ ಆಗಮನದಿಂದ ಕಾರ್ಮಿಕ ಸಂಬಂಧಗಳಲ್ಲಿ ಆದ ಗುಣಾತ್ಮಕ ಬದಲಾವಣೆಯಲ್ಲಿದೆ ಎನ್ನಬಹುದು.

ಬದಲಾಗುತ್ತಿರುವ ಕೃಷಿ ಕಾರ್ಯಕ್ಷೇತ್ರದ ಸ್ವರೂಪವನ್ನು ಕೇವಲ ಪರಿಮಾಣಾತ್ಮಕವಾಗಿ ಮಾತ್ರವೇ ವಿವರಿಸಲು ಸಾಧ್ಯವಿಲ್ಲ. ಕಳೆದ ಅರ್ಧ ಶತಮಾನದಲ್ಲಿ ಮಧ್ಯ ಬಯಲು ಪ್ರದೇಶದಲ್ಲಿ ಉತ್ಪಾದನಾ ಸಂಬಂಧಗಳಲ್ಲಿ ಮುಖ್ಯವಾದ ಗುಣಾತ್ಮಕ ಬದಲಾವಣೆಗಳಾಗಿದ್ದು, ಇವು ಜೀವಾನಾಧಾರ ಕೃಷಿ ಮೂಲಗಳ ಮೇಲೆ ತೀವ್ರ ಒತ್ತಡ ಹೆಚ್ಚಿಸಿವೆ. ಹಿಂದೆ ದಕ್ಷಿಣ ಗುಜರಾತಿನ ಹಲ್ಪತಿಗಳು ಜೀತದ ಸ್ಥಿತಿಯಲ್ಲಿದ್ದರು. ಸಾಲದ ಮೂಲಕ ಭೂಮಾಲೀಕರಿಗೆ ಋಣಿಯಾಗುವ ಒಬ್ಬ ಕೃಷಿ ಸೇವಕನಿಗೆ ಇದ್ದ ಹೆಸರು-ಹಲಿ (*Hali*). ಕನಿಷ್ಠ ಜೀವನಾಧಾರ ಪಾಲಿಗೆ ಪ್ರತಿಯಾಗಿ ಅನಿರ್ದಿಷ್ಟ ಕಾಲ ಮಾಲೀಕನಿಗಾಗಿ ಆತ ಚಿಕ್ಕವಯಸ್ಸಿನಿಂದಲೇ ಕೆಲಸ ಮಾಡಬೇಕಿತ್ತು. ಶ್ರೀಮಂತ ರೈತನೊಬ್ಬ ಕೆಲಸಗಾರನ ಮದುವೆಯ ಎಲ್ಲ ವೆಚ್ಚವನ್ನು ಭರಿಸಿದಾಗ ಸಾಮಾನ್ಯವಾಗಿ ಇಂಥ ಸಂಬಂಧ ರೂಪುಗೊಳ್ಳುತ್ತಿತ್ತು. ಇಂಥ ಸಾಲವನ್ನು ಮೂಲಭೂತವಾಗಿ ವಸ್ತುಗಳ ಮೂಲಕ ನೀಡಲಾಗುತ್ತಿತ್ತು. ಮಾಲೀಕನಿಗೆ ಮನೆಯಲ್ಲಿ ಕೆಲಸದಾಳಾಗಿ ಕಾರ್ಯ ನಿರ್ವಹಿಸುತ್ತಿದ್ದ ಹಲಿಯ ಪತ್ನಿಯನ್ನು ತನ್ನ ಸೇವೆಗೆಂದು ಬಳಸಲು ಹಕ್ಕು ಇರುತ್ತಿತ್ತು; ಅವರ ಹದಿವಯಸ್ಸಿನ ಮಕ್ಕಳ ಮೇಲೆಯೂ ಕೂಡ ಹಕ್ಕು ಇರುತ್ತಿತ್ತು. ಯಾವುದೇ ವೇತನವಿಲ್ಲದೆ ಹೆಣ್ಣುಮಕ್ಕಳು ತಾಯಿಗೆ ನೆರವಾಗುತ್ತಿದ್ದರು; ಗಂಡುಮಕ್ಕಳು ಎಂಟು ಇಲ್ಲವೇ ಹತ್ತು ವರ್ಷ ತಲಪಿದ ಬಳಿಕ ದನ ಕಾಯಬೇಕಿತ್ತು. ಒಟ್ಟಾಗಿ ಮತ್ತು ಪರಸ್ಪರ ಗಣನೀಯ ವಿನಿಮಯದ ಮೂಲಕ ಜೀತದಾಳು ಕುಟುಂಬವು ಜಮೀನು, ಮನೆ ಮತ್ತು ಮಾಲೀಕನ ಮನೆ ಅಂಗಳದಲ್ಲಿನ ಎಲ್ಲ ಕೆಲಸ ಮಾಡುತ್ತಿದ್ದರು. ದಿನವಿಡೀ ಮತ್ತು ಅಗತ್ಯವಿದ್ದರೆ ಸಂಜೆ ಅಥವಾ ರಾತ್ರಿ,

ಮಾಲೀಕನ ಕರೆಗೆ ಓಗೊಡಬೇಕಿತ್ತು. ಪ್ರತಿಯಾಗಿ ಜೀತದಾಳಿಗೆ ಜೀವನಾಧಾರವನ್ನು ಒದಗಿಸುವ ಹೊಣೆಗಾರಿಕೆಯು ಮಾಲೀಕನದಾಗಿತ್ತು. ಪ್ರತಿನಿತ್ಯದ ದಿನಸಿಯಲ್ಲದೆ, ಬೆಳಗ್ಗೆ ಅಥವಾ ಮಧ್ಯಾಹ್ನದ ಊಟ, ಹೊಗೆಸೊಪ್ಪು, ಆಗಾಗ ಮದ್ಯ ಸೇವನೆಗೆ ನಗದು, ಉರುವಲು, ಪ್ರತಿ ವರ್ಷ ಒಂದು ಜೊತೆ ಬಟ್ಟೆ, ಕುಟುಂಬದ ಸದಸ್ಯರು ಕಾಯಿಲೆ ಬಿದ್ದರೆ ಔಷಧ, ಮಾಲೀಕನ ಜಮೀನಿನಲ್ಲಿ ಗುಡಿಸಲು ಹಾಕಿಕೊಳ್ಳಲು ಸ್ವಲ್ಪ ಜಾಗ, ಚಾವಣಿಗೆ ಹೊದೆಸಲು ತ್ಯಾಜ್ಯ ವಸ್ತುಗಳು ಹಾಗೂ ತನ್ನ ಕುಟುಂಬದ ಸ್ವಂತ ಬಳಕೆಗಾಗಿ ಬೆಳೆಸಲು ತುಂಡು ಭೂಮಿಯನ್ನು ಕೊಡಲಾಗುತ್ತಿತ್ತು.

ಇಂಥ ಕೆಲಸದ ಸ್ವರೂಪ ಎಷ್ಟು ವಿಸ್ತಾರವಾಗಿತ್ತೆಂದರೆ, ವೇತನ ಎಷ್ಟು, ಎಂಥ ಕೆಲಸ, ಇಲ್ಲವೇ ಕೆಲಸದ ಅವಧಿಯ ಬಗ್ಗೆ ಸ್ಪಷ್ಟವಾಗಿ ತಿಳಿಸಲಾಗುತ್ತಿರಲಿಲ್ಲ. ವರ್ಷವಿಡೀ ಕೆಲಸ ಇರುತ್ತಿರಲಿಲ್ಲ ಮತ್ತು ಕೆಲಸವಿಲ್ಲದ ಋತುವಿನಲ್ಲಿ ಪಡೆದ ದವಸ-ಧಾನ್ಯವನ್ನು ಮುಂದಿನ ವೇತನಕ್ಕೆ ಮುಂಗಡ ಎಂದು ಪರಿಗಣಿಸಲಾಗುತ್ತಿತ್ತು. ಈ ರೀತಿ, ವರ್ಷದಿಂದ ವರ್ಷಕ್ಕೆ ಸಾಲ ಕ್ರಮೇಣ ಹೆಚ್ಚುತ್ತಿತ್ತು: ಉಳಿಕೆ ಮೊತ್ತಕ್ಕೆ ಮಾಲೀಕ ಬಡ್ಡಿ ವಿಧಿಸುತ್ತಿದ್ದುದು ಇದಕ್ಕೆ ಭಾಗಶಃ ಕಾರಣ. ಋಣ, ಬಡ್ಡಿ, ಸಾಲ ಮತ್ತು ಮುಂಗಡ ಇವೆಲ್ಲ ಹೆಸರಿಗೆ ಮಾತ್ರ ಇದ್ದವು. ಎರಡೂ ಪಕ್ಷಗಳಿಗೆ ಈ ಪರಸ್ಪರಾವಲಂಬಿ ಸಂಬಂಧವನ್ನು ಋಣ ತೀರಿಸಿ ಅಂತ್ಯಗೊಳಿಸುವುದು ಬೇಕಿರಲಿಲ್ಲ. ಮಾಲೀಕರಿಗೆ ಜೀತ ಪದ್ಧತಿ ಆಕರ್ಷಕವಾಗಿತ್ತು: ಏಕೆಂದರೆ, ಇದರಿಂದ ಶಾಶ್ವತವಾದ ಮತ್ತು ದುಬಾರಿಯಲ್ಲದ ಕಾರ್ಮಿಕ ಶಕ್ತಿ ಖಚಿತವಾಗಿ ಲಭ್ಯವಾಗುತ್ತಿತ್ತು. ಬದಲಾಗಿ, ಹಲ್ಪತಿಗಳಿಗೆ ಕನಿಷ್ಠವಾದದ್ದಾದರೂ, ಭದ್ರತೆ ಎನ್ನುವುದು ಸಿಗುತ್ತಿದ್ದುದರಿಂದ ಇಂಥ ಸಂಬಂಧವನ್ನು ಆಯ್ಕೆ ಮಾಡಿಕೊಳ್ಳುತ್ತಿದ್ದರು. ವಸಾಹತುಶಾಹಿ ವರದಿಗಳ ಪ್ರಕಾರ, ಸಣ್ಣ ಸಂಖ್ಯೆಯಲ್ಲಿದ್ದ ತಾತ್ಕಾಲಿಕ ಕೂಲಿ ಕಾರ್ಮಿಕರ ಪರಿಸ್ಥಿತಿಯು ಆರ್ಥಿಕ ದೃಷ್ಟಿಕೋನದಿಂದ ಇದಕ್ಕಿಂತ ಕಡೆಯಾಗಿದ್ದರು ಮತ್ತು ಸಾಮಾಜಿಕವಾಗಿ ಅವರಿಗೆ ಕಡಮೆ ಗೌರವ ಸಿಗುತ್ತಿತ್ತು. ಇಂಥ ಸ್ವಇಚ್ಛೆಯ ದಾಸ್ಯದಲ್ಲಿ ಪೋಷಣೆಯ ಮೂಲಾಂಶಗಳು ಅಂತರ್ಗತವಾಗಿದ್ದವು (ಬ್ರೆಮನ್, 1974). ಮಾಲೀಕನು ಸೇವಕ ಹಾಗೂ ಆತನ ಕುಟುಂಬವನ್ನು ನೋಡಿಕೊಳ್ಳಲು ಬದ್ಧನಾಗಿರುವುದರ ಜೊತೆಗೆ ಮೂರನೆಯವರಿಂದ ಅವರನ್ನು ರಕ್ಷಿಸುವ ನೈತಿಕ ಹೊಣೆಗಾರಿಕೆಯನ್ನು ಒಪ್ಪಿಕೊಂಡಿದ್ದ. ಪ್ರತಿಯಾಗಿ, ಆತನ ಆಶ್ರಿತರಿಂದ ಬೇಷರತ್ ಸ್ವಾಮಿನಿಷ್ಠೆ ಮತ್ತು ಸಂಪೂರ್ಣ ಅಧೀನತೆ ಆತನಿಗೆ ಖಚಿತವಾಗಿತ್ತು.

ಈ ಶ್ರೇಣಿಕೃತ ಸಂಬಂಧದ ವೈಯಕ್ತಿಕ ವೈಶಿಷ್ಟ್ಯದ ಪ್ರಾಮುಖ್ಯವನ್ನು ಹಾಗೂ ಮಾಲೀಕ ಮತ್ತು ಸೇವಕರ ಕುಟುಂಬಗಳ ಸದಸ್ಯರ ನಡುವಿನ ತಲತಲಾಂತರ ಸಲಿಗೆ ಹಾಗೂ ವಾತ್ಸಲ್ಯದ ನಿರಾಳತೆಯಿಂದಾಗಿ ಹಲಿ ವ್ಯವಸ್ಥೆಯು ತುಂಬ ಪರಿಪೂರ್ಣವಾಗಿದೆ ಎನ್ನುವ ತೀರ್ಮಾನಕ್ಕೆ ಬರುವುದು ಬಹಳ ಸುಲಭ. ಕರ್ತವ್ಯ ಮತ್ತು ಹಕ್ಕುಗಳ ಏರುಪೇರಾದ ವಿಭಜನೆಯನ್ನು ಸಮತೋಲಗೊಳಿಸಿದ ಈ ವಿಶಿಷ್ಟ ಪರಸ್ಪರತೆಯು ಕೇವಲ ಆದರ್ಶಗಳಾಗಿ ಅಸ್ತಿತ್ವದಲ್ಲಿದ್ದವಷ್ಟೆ. ವಾಸ್ತವದಲ್ಲಿ, ಮಾಲೀಕ ತನ್ನ ಭೂರಹಿತ ಆಶ್ರಿತನ ಮೇಲೆ ಪ್ರದರ್ಶಿಸುತ್ತಿದ್ದ ದರ್ಪ ಮತ್ತು ನಿರ್ಬಂಧಗಳು ಎರಡು ಪಕ್ಷಗಳ ನಡುವಿನ ತೀವ್ರ ಅಸಮಾನತೆಯನ್ನು ಎತ್ತಿ ತೋರಿಸುತ್ತಿದ್ದವು. ಮಾಲೀಕನು ತನ್ನ ಜೀತದಾಳಿನಿಂದ ಕಿತ್ತುಕೊಳ್ಳುತ್ತಿದ್ದ ಅಧಿಕ ಮೌಲ್ಯವು ಸೀಮಿತ ಅರ್ಥದಲ್ಲಿ ಆರ್ಥಿಕ ಮಾತ್ರ ಆಗಿರಲಿಲ್ಲ. ಹಲಿ ತನ್ನ ಮಾಲೀಕನಿಗೆ ತೋರಿಸುತ್ತಿದ್ದ

ನಮ್ರತೆ ಮತ್ತು ಗೌರವಗಳು ಮಾಲೀಕನ ಮೇಲರಿಮೆಯನ್ನು ಹೆಚ್ಚಿಸಿತು. ಈ ಅರ್ಥದಲ್ಲಿ, ಸಾರಭೂತವಾಗಿ ಶೋಷಕ ಪ್ರವೃತ್ತಿಯದಾಗಿದ್ದ ಆಶ್ರಯದಾತನೆಂಬ ಅನುಗ್ರಹ ಮನೋಭಾವವನ್ನು ಬಂಡವಾಳಶಾಹಿ ಪೂರ್ವ ಸಂಬAಧದ ಸಾಮಾಜಿಕ-ರಾಜಕೀಯದ ಒಂದು ಆಯಾಮವಾಗಿ ನೋಡಬೇಕಾಗಿದೆ.

ಕನಿಷ್ಠ ಜೀವನಾಧಾರ ಆರ್ಥಿಕತೆ ಮತ್ತು ಬಲಾಢ್ಯ ಭೂ ಮಾಲೀಕರ ಊಳಿಗಮಾನ್ಯ ಜೀವನಶೈಲಿಗೆ ಇಂಥ ದಾಸ್ಯ ಪ್ರವೃತ್ತಿಯನ್ನು ಸುಲಭವಾಗಿ ಗಂಟು ಹಾಕಬಹುದಾಗಿದ್ದು, ಇದು ಮಾರುಕಟ್ಟೆಗಾಗಿ ಉತ್ಪಾದನೆ ಮಾಡುವ ಸ್ಥಿತಿಗೆ ರೂಪಾಂತರಗೊಂಡಾಗ ಅಂತ್ಯಗೊಂಡಿತು. ವಾಸ್ತವವೆಂದರೆ, ದಕ್ಷಿಣ ಗುಜರಾತಿನ ರೈತರು ಜಾಗತಿಕ ಮಾರುಕಟ್ಟೆಗೆ ಹತ್ತಿಯನ್ನು ಬೆಳೆಯುವುದರಿಂದ ಬಂದ ಲಾಭವನ್ನು ತಮ್ಮದೇ ಆದ ಕಾರ್ಮಿಕ ಶಕ್ತಿಯನ್ನು ಹಲಿಗಳಿಂದ ಬದಲಿಸಲು ಬಳಸಿಕೊಂಡರು ಎನ್ನುವುದಕ್ಕೆ ಸೂಚನೆಗಳಿವೆ. ಈ ಮೂಲಕ ಹೊರಜಗತ್ತಿಗೆ ತಮ್ಮ ಐಶ್ವರ್ಯ ಹೆಚ್ಚಳವನ್ನು ಪ್ರದರ್ಶಿಸಲು ಅವರಿಗೆ ಅವಕಾಶ ಸಿಕ್ಕಿತು. ಕೃಷಿ ಆರ್ಥಿಕತೆಯಲ್ಲಿ ಬಂಡವಾಳದ ಪ್ರವೇಶದಿಂದ ಆದ ಪರಿಣಾಮಗಳು ಭೂಮಿಯ ನಿರ್ವಹಣೆಯ ರೂಪದಲ್ಲಿ ಕಂಡುಬಂದಾಗ, ಅಂದರೆ, ವೇತನದ ನಗದೀಕರಣದ ಹೆಚ್ಚಳ ಹಾಗೂ ಎಲ್ಲ ಆರ್ಥಿಕ ಸಂಬಂಧಗಳ ಗುತ್ತಿಗೆ ನೀಡುವಿಕೆಯಿಂದ ಭೂ ಮಾಲೀಕರು ಹಾಗೂ ಭೂರಹಿತ ಕಾರ್ಮಿಕರ ನಡುವಿನ ಹಿಂದಿನ ಪೋಷಕ-ಆಶ್ರಿತ ಸಂಬಂಧಗಳಿಗೆ ಇದ್ದ ಪ್ರಾಮುಖ್ಯತೆಯು ಕಡಮೆ ಆಯಿತು. ಆಗಿನಿಂದ ಶ್ರೀಮಂತ ರೈತರು ಆರ್ಥಿಕ ವಿಚಾರಪರತೆಯ ದೃಷ್ಟಿಕೋನದಿಂದ ಅನಗತ್ಯ ಎಂದು ಪರಿಗಣಿತರಾದ ಕೆಳ ಅಂತಸ್ತಿನವರನ್ನು ಸ್ವಾಧೀನಪಡಿಸಿಕೊಳ್ಳಲು ಬಯಸುವ ಪೋಷಕರಾಗಿರದೆ ಉದ್ಯೋಗದಾತರಾಗಿ ವರ್ತಿಸತೊಡಗಿದರು.

ಶ್ರಮವನ್ನು ‘ಮುಕ್ತ’ ಎಂದು ಅಧಿಕೃತವಾಗಿ ಗುರುತಿಸಲಾದ ಈ ಪರಿವರ್ತನೆಯು, ನೂತನ ಉತ್ಪಾದನಾ ವಿಧಾನಗಳ ತತ್ವಗಳ ಪ್ರಕಾರ, ಲಾಭವು ವೆಚ್ಚವನ್ನು ಸರಿದೂಗಿಸದೆ ಇದ್ದ ಕಾರಣ ಭೂ ಮಾಲೀಕರು ತಮ್ಮ ಕಾರ್ಮಿಕರಿಗೆ ಇನ್ನು ಮುಂದೆ ಯಾವುದೇ ಭದ್ರತೆಯನ್ನು ಒದಗಿಸಲಾಗದ ಸಂದರ್ಭದಲ್ಲಿ ಸಂಭವಿಸಿತು. ಜೀತ ಕಾರ್ಮಿಕ ವ್ಯವಸ್ಥೆ ವಿಘಟನೆಯಾಗಲು ನಿಶ್ಚಿತವಾದ ಹಾಗೂ ಸಮನಾಗಿ ಮುಖ್ಯವಾದ ಕಾರಣವೆಂದರೆ, ಭೂರಹಿತ ಕಾರ್ಮಿಕರು ತಮ್ಮ ಸಂಪೂರ್ಣ ಪರಾಧೀನ ಸ್ಥಿತಿಯನ್ನು ವಿರೋಧಿಸಿ ಬಂಡೆದ್ದದ್ದು. ಹೊಸ ಮೌಲ್ಯವ್ಯವಸ್ಥೆ ಪ್ರಕಾರ, ಅವರ ಹಿಂದಿನ ಜೀತಗಾರಿಕೆ ಜೊತೆಗೆ ತಳಕು ಹಾಕಿಕೊಂಡಿದ್ದ ಸಾಮಾಜಿಕ ಕೀಳರಿಮೆಯ ಕಳಂಕದಿಂದ ಮುಕ್ತರಾಗಲು ಯುವ ಪೀಳಿಗೆಯ ಕೃಷಿ ಕಾರ್ಮಿಕರು ದಿನಗೂಲಿ ಗಳಿಕೆಯ ಜೀವನಕ್ಕೆ ವಿಶಿಷ್ಟವಾದ ಆದ್ಯತೆಯನ್ನು ತೋರಿಸಿದರು. ಇದರಿಂದ ಅವರು ಆಗಾಗ ತಮ್ಮ ಕೆಲಸ ಹಾಗೂ ಉದ್ಯೋಗದಾತರನ್ನು ಬದಲಿಸಬೇಕಾದ ಅಗತ್ಯವು ಸಂಭವಿಸುತ್ತಿತ್ತು.

ಈ ವಿಮೋಚನೆ ಪ್ರವೃತ್ತಿಯ ಕರಾಳ ಮುಖವೇನೆಂದರೆ, ಈಗ ಒಬ್ಬ ಕಾರ್ಮಿಕನ ಮೌಲ್ಯವು ಅವನ ಕ್ಷಮತೆಯಿಂದಲೇ ನಿರ್ಧಿತವಾಗುತ್ತದೆ ಮತ್ತು ಸಾಕಷ್ಟು ಪೂರೈಕೆ ಇರುವುದರ ಕಾರಣ ಶ್ರಮಕ್ಕೆ ತೀರ ಕಡಮೆ ವೇತನ ನಿಗದಿ ಆಗಿದೆ. ಹಲಿಗಳಿಗೆ ಋತುಮಾನದ ಆಚೆಯೂ ಪೋಷಕರು ನೀಡುತ್ತಿದ್ದ ದಿನನಿತ್ಯದ ಅಗತ್ಯ ವಸ್ತುಗಳನ್ನು

ತಾತ್ಕಾಲಿಕ ಕಾರ್ಮಿಕರಿಗೆ ನೀಡಲಾಗುವುದಿಲ್ಲ. ಆದ್ದರಿಂದ, ಅವರು ಕೆಲಸವಿಲ್ಲದ ದಿನಗಳಲ್ಲಿ ತಮ್ಮದೇ ಆದ ಜೀವನೋಪಾಯವನ್ನು ಕಂಡುಕೊಳ್ಳುವುದರ ಮೂಲಕ ಬದುಕಬೇಕಾಗಿದೆ. ಬೇಡಿಕೆ ಮತ್ತು ಪೂರೈಕೆ ನಡುವಿನ ಸಂಬಂಧಗಳ ಬದಲಾವಣೆಗೆ ರಾಜಕೀಯ ಮಾತ್ರವಲ್ಲದೆ ಸಾಂಸ್ಕೃತಿಕ ಕಾರಣಗಳೂ ಇದ್ದು, ಈ ಶ್ರೇಣಿಕೃತ ಸಂಬಂಧಗಳ ಅಪೇಕ್ಷಣೀಯತೆ ಅಥವಾ ಉಪಯುಕ್ತತೆಯನ್ನು ಎರಡೂ ಪಕ್ಷಗಳು ಪುನರ್ಮೌಲ್ಯನ ಮಾಡಬೇಕಾಗಿ ಬಂದಿತು. ಆರ್ಥಿಕವಲ್ಲದ ಆಯಾಮಗಳಿಂದ ವಿಮೋಚನೆಗೊಂಡ ಕಾರ್ಮಿಕನ ಶ್ರಮವು ಈಗ ಒಂದು ಸರಕು ಎಂದು ಗುರುತಿಸಲ್ಪಡುತ್ತದೆ. ಆದರೆ, ಅದರ ಪೂರೈಕೆ, ಬೇಡಿಕೆಗಿಂತ ಅತ್ಯಂತ ಹೆಚ್ಚು ಇದೆ.

ಈ ತೀರ್ಮಾನವು ದಕ್ಷಿಣ ಗುಜರಾತಿನ ಗ್ರಾಮೀಣ ಆರ್ಥಿಕತೆಯಲ್ಲಿ ಒಟ್ಟಾರೆ ಉದ್ಯೋಗಾವಕಾಶ ಹೆಚ್ಚಳಗೊಂಡಿದೆ ಎನ್ನುವ ನನ್ನ ಹಿಂದಿನ ಪ್ರತಿಪಾದನೆಗೆ ವಿರುದ್ಧವಾಗಿದೆ. ಆದಾಗ್ಯೂ, ಸ್ಥಳೀಯ ಕಾರ್ಮಿಕರಲ್ಲಿ ಒಂದು ಸಣ್ಣ ಅಲ್ಪಸಂಖ್ಯಾತ ಗುಂಪು ಕೃಷಿಗೆ ಹೊರತಾದ ಹೊಸ ಆದಾಯ ಅವಕಾಶಗಳಿಗೆ ಅರ್ಹವೆನಿಸಿದೆ. ಇಂಥ ಕೆಲಸಗಳಲ್ಲಿ ಹೆಚ್ಚಿನದನ್ನು ಗುಜರಾತಿನ ಬೇರೆ ಭಾಗಗಳಿಂದ ಅಥವಾ ಬೇರೆ ರಾಜ್ಯಗಳಿಂದ ಬರುತ್ತಿರುವವರು ಭರ್ತಿ ಮಾಡುತ್ತಿದ್ದಾರೆ. ಅಗತ್ಯವಾದ ಕೌಶಲ ಅಥವಾ ಔದ್ಯೋಗಿಕ ಮನಃಸ್ಥಿತಿ ಹೊಂದಿಲ್ಲ ಎನ್ನುವ ಕಾರಣ ನೀಡಿ ಈ ನೂತನ ಉದ್ಯೋಗಾವಕಾಶಗಳನ್ನು ಹಲ್ಪತಿಗಳಿಗೆ ನಿರಾಕರಿಸಲಾಗಿದೆ. ವಲಸಿಗರು ಭಾರಿ ಪ್ರಮಾಣದಲ್ಲಿ ಆಗಮಿಸುತ್ತಿರುವುದರಿಂದ, ಕೃಷಿ ಕಾರ್ಮಿಕ ಎನ್ನುವ ಹಲ್ಪತಿಗಳ ಸಾಂಪ್ರದಾಯಿಕ ಸ್ಥಾನಕ್ಕೆ ಕುತ್ತು ಬಂದಿದೆ. ಕಬ್ಬು ಕಟಾವಿಗೆ ಪ್ರತಿ ವರ್ಷ ಆರರಿಂದ ಏಳು ತಿಂಗಳ ಅವಧಿಗೆ ಆಗಮಿಸುವ ಲಕ್ಷಕ್ಕೂ ಅಧಿಕ ಕಾರ್ಮಿಕರ ಸೇನೆ ಇದಕ್ಕೆ ಒಂದು ನಿರ್ದಿಷ್ಟ ಉದಾಹರಣೆಯಾಗಿದೆ. ಈ ವಾರ್ಷಿಕ ವಲಸೆಗೆ ಕಬ್ಬು ಕಟಾವಿಗೆ ಸ್ಥಳೀಯ ಕಾರ್ಮಿಕರನ್ನು ಬಳಸಿಕೊಳ್ಳಲು ಸಹಕಾರ ಸಂಘಗಳು ನಿರಾಕರಿಸುವುದು ಕಾರಣವಾಗಿದೆ. ಸ್ಥಳೀಯ ಕಾರ್ಮಿಕರನ್ನು ವಲಸೆಗಾರರಿಂದ ಬದಲಿಸುವುದರ ಹಿಂದಿನ ಕಾರಣಗಳನ್ನು ನಾನು ನಂತರದಲ್ಲಿ ಚರ್ಚಿಸಲಿದ್ದೇನೆ. ಇದರ ಪರಿಣಾಮವೇನೆಂದರೆ, ಹಲ್ಪತಿಗಳು ಆರ್ಥಿಕ ಬದಿಗೊತ್ತುವಿಕೆಯ ಪ್ರಕ್ರಿಯೆಗೆ ಸಿಲುಕಿಕೊಂಡಿದ್ದಾರೆ - ಇದು ಪುರುಷರಿಗಿಂತ ಹೆಚ್ಚಾಗಿ ಮಹಿಳೆಯರನ್ನು ಬಲಿಪಶುವನ್ನಾಗಿಸುತ್ತದೆ.

ಈ ಪೋಷಣೆ ವ್ಯವಸ್ಥೆಯು ಕಣ್ಮರೆಯಾದ ಪರಿಣಾಮವಾಗಿ ಹಲ್ಪತಿ ಕೃಷಿ ಕಾರ್ಮಿಕರು ಸಾಮಾಜಿಕವಾಗಿ ಪ್ರತ್ಯೇಕಿಸಲ್ಪಟ್ಟಿದ್ದಾರೆ. ತಮ್ಮ ಮಾಜಿ ಮಾಲೀಕರ ಮಧ್ಯಸ್ಥಿಕೆಯಿಲ್ಲದೆ ಅವರ ನ್ಯಾಯಯುತ ಬೇಡಿಕೆಗಳಿಗೆ ಯಾರೂ ಕಿವಿಗೊಡುತ್ತಿಲ್ಲ. ಹಿಂದೆ ಹಲ್ಪತಿಗಳಿಗೆ ನೀಡಲಾಗುತ್ತಿದ್ದ ವೇತನ ಕನಿಷ್ಠ ಜೀವನಾಧಾರ ಮಟ್ಟದಲ್ಲಿದ್ದರೂ, ಒಪ್ಪಂದ ಮಾಡಿಕೊಂಡಿದ್ದರಿಂದ ಭೂ ಮಾಲೀಕರು ತಮ್ಮ ಕೈಕೆಳಗಿನವರ ಜೀವನಾಧಾರವನ್ನು ಕೆಲಸವಿಲ್ಲದಾಗಲೂ ಖಾತ್ರಿಗೊಳಿಸುತ್ತಿದ್ದರು. ಈ ಔದಾರ್ಯದಲ್ಲಿ ಸ್ವಹಿತಾಸಕ್ತಿ ಇತ್ತಾದರೂ, ಅದನ್ನು ವಸಾಹತುಪೂರ್ವ ಉತ್ಪಾದನಾ ಮಾದರಿಯ ಚೌಕಟ್ಟಿನಲ್ಲಿ ಅರ್ಥ ಮಾಡಿಕೊಳ್ಳಬಹುದಾಗಿತ್ತು. ನಿರ್ದಿಷ್ಟವಾಗಿ ಮತ್ತು ಈ ವಿಷಯಕ್ಕೆ ಸಂಬಂಧಿಸಿದಂತೆ ಹೊಸ ಬದಲಾವಣೆಗೆ ವ್ಯವಸ್ಥೆಯನ್ನು ಸಿದ್ಧಗೊಳಿಸಲಾಯಿತು. ಭೂರಹಿತರು ಯಾವಾಗಲೂ ಬಡತನದಲ್ಲೇ ಜೀವನ ಸಾಗಿಸಿದವರು: ಆದರೆ, ತಾವು ಹಿಂದೆ ಅವಲಂಬಿಸಬಹುದಾಗಿದ್ದ ಮೂಲಭೂತ

ಭದ್ರತೆಯು ಇಲ್ಲದ ಕಾರಣ ಕೆಲವರ ಕಾರ್ಪಣ್ಯ ಇನ್ನಷ್ಟು ತೀವ್ರಗೊಂಡಿದೆ. ಅವರಿಗೆ ಹೊಸದಾಗಿ ಲಭ್ಯವಾದ ಸ್ವಾತಂತ್ರ್ಯವು ಹಸಿವಿನಿಂದ ಬಳಲು ಇದ್ದ ಸ್ವಾತಂತ್ರ್ಯಕ್ಕಿಂತ ಸ್ವಲ್ಪ ಹೆಚ್ಚಿನದಾಗಿದೆ ಅಷ್ಟೇ.

ರಾಜ್ಯದ ಹಸ್ತಕ್ಷೇಪವು ಅವರ ಸ್ಥಿತಿಯನ್ನು ಉತ್ತಮಗೊಳಿಸಲಿಲ್ಲ. ರಾಷ್ಟ್ರೀಯ ಮತ್ತು ಪ್ರಾಂತ್ಯ ಹಂತಗಳ ಸರ್ಕಾರಗಳು ಭೂರಹಿತರಿಗೆ ಬದುಕುವ ಹಕ್ಕು ಇದೆ ಎಂದು ಗುರುತಿಸುತ್ತವಾದರೂ, ಆಚರಣೆಯಲ್ಲಿ ಇದಕ್ಕೆ ಬೇಕಿರುವ ಅಗತ್ಯ ಸಂರಕ್ಷಣೆಯು ಅಸ್ತಿತ್ವದಲ್ಲಿ ಇಲ್ಲ. ಕನಿಷ್ಠ ವೇತನವನ್ನು ಕಾನೂನು ಕ್ರಮಗಳ ಮೂಲಕ ಬದುಕುಳಿಯುವುದಕ್ಕಿಂತ ಸ್ವಲ್ಪ ಹೆಚ್ಚಿನ ಮಟ್ಟದಲ್ಲಿ ನಿಗದಿಪಡಿಸಲಾಗಿದೆಯೇ ಹೊರತು ಅದು ಕೆಲಸ ಮಾಡದಿರುವ ಕುಟುಂಬ ಸದಸ್ಯರನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ. ಅಷ್ಟಲ್ಲದೆ, ನಾನು ಬೇರೆಡೆ ವಿವರಿಸಿದಂತೆ, ಕಾನೂನಿನ ಪಾಲನೆ ಆಗುತ್ತಿದೆಯೇ ಎಂಬುದರ ಪರಿಣಾಮಕಾರಿ ಉಸ್ತುವಾರಿ ಇಲ್ಲದೆ ಇರುವುದರಿಂದ, ನೀಡುವ ವೇತನ ಸಾಮನ್ಯವಾಗಿ ಕನಿಷ್ಠ ವೇತನಕ್ಕಿಂತ ತೀರ ಕಡಮೆ ಇರುತ್ತದೆ (ಬ್ರೆಮನ್, 1985). ತಮ್ಮದೇ ಪ್ರಾಂತ್ಯದಲ್ಲಿ ತಮಗೆ ಪ್ರಾಶಸ್ತ್ಯ ನೀಡಬೇಕೆಂಬ ಹಲ್ಪತಿಗಳ ಕೋರಿಕೆಯನ್ನು ಸರ್ಕಾರ ಬೆಂಬಲಿಸುತ್ತಿಲ್ಲ. ಅಧಿಕೃತ ದೃಷ್ಟಿಕೋನ ಏನೆಂದರೆ, ಕಾರ್ಮಿಕರ ಮುಕ್ತ ಚಲನೆಗೆ ಯಾವುದೇ ರೀತಿಯಲ್ಲಿ ತಡೆಯಿರಬಾರದು ಮತ್ತು ಉತ್ಪಾದನಾ ಪ್ರಕ್ರಿಯೆಗೆ ಪ್ರವೇಶವು ಬೇಡಿಕೆ ಹಾಗೂ ಪೂರೈಕೆಯ ಕಾರ್ಯವಿಧಾನದಿಂದ ಆಗುವ ಸಹಜ ಪರಿಣಾಮವನ್ನು ಸಂಪೂರ್ಣವಾಗಿ ಆಧರಿಸಿರಬೇಕು. ಆದಾಗ್ಯೂ, ಭೂರಹಿತ ಕಾರ್ಮಿಕರ ಪರಿಸ್ಥಿತಿಯನ್ನು ಸುಧಾರಿಸಲು ಪ್ರಯತ್ನಗಳು ನಡೆದಾಗ, ಪ್ರಭುತ್ವವು ತೆಗೆದುಕೊಂಡ ನಿಷ್ಕ್ರಿಯ ನಿಲುವುಗಳು ಸಕ್ರಿಯ ವಿರೋಧವಾಗಿ ತಿರುವು ತೆಗೆದುಕೊಳ್ಳುತ್ತವೆ. ಗ್ರಾಮೀಣ ಶ್ರೇಣಿಯ ಕೆಳ ಹಂತದಲ್ಲಿರುವ ಯಾವುದೇ ವಿಮೋಚನಾ ಪ್ರವೃತ್ತಿಗೆ ಕಾರ್ಮಿಕರನ್ನು ಸಂಘಟಿಸಲು ಪ್ರಯತ್ನಿಸುವ ಸಂಸ್ಥೆಗಳ ಅಗತ್ಯವಿವೆ. ಆದಾಗ್ಯೂ, ಅಧಿಕಾರಸ್ಥರು ಅಂಥ ಚಳವಳಿಗಳು ಕಾನೂನು ಮತ್ತು ಸುವ್ಯವಸ್ಥೆಗೆ ಕುತ್ತು ಎಂದು ಭಾವಿಸುತ್ತವೆ ಮತ್ತು ಆರಂಭದ ಹಂತದಲ್ಲೇ ಬಲವಾದ ಪ್ರತಿ-ಕ್ರಮ ತೆಗೆದುಕೊಳ್ಳುತ್ತವೆ.

ದಕ್ಷಿಣ ಗುಜರಾತಿನ ಮಧ್ಯ ಬಯಲಿನ ಭೂರಹಿತರು ಮುರಿದುಹೋದ ಹೋರಾಟದ ಚೈತನ್ಯ ಹೊಂದಿರುವ ವಿಧೇಯ ಜನರೆಂದು ತೋರಿಸುವುದು ತಪ್ಪಾಗುತ್ತದೆ. ಅವರು ನಿಷ್ಕ್ರಿಯ, ನೀತ್ಯತೀತ (amoral) ವ್ಯಕ್ತಿಸ್ವಾತಂತ್ರ್ಯವಾದ ಮತ್ತು ನಿಯತಿವಾದ (Rudolph and Rudolph (ರೂಡಾಲ್ಫ್ ಮತ್ತು ರೂಡಾಲ್ಫ್), 1987: 387) ಸ್ಥಿತಿಯಲ್ಲಿ ಬದುಕುತ್ತಿದ್ದಾರೆ ಎಂದು ಚಿತ್ರಿಸುವುದು ಅಪರಿಪೂರ್ಣ ಹಾಗೂ ಅನ್ಯಾಯಯುತ. ತಮ್ಮ ಸಾಮಾಜಿಕ ಬದಿಗೊತ್ತುವಿಕೆಗೆ ತಾವು ಸುಲಭವಾಗಿ ಬಗ್ಗುವುದಿಲ್ಲ ಎಂದು ಹಲ್ಪತಿಗಳು ಮತ್ತೆಮತ್ತೆ ತೋರಿಸಿಕೊಟ್ಟಿದ್ದಾರಾದರೂ, ಅವರ ಬಂಡಾಯ ಪ್ರವೃತ್ತಿಯನ್ನು ಶಾಶ್ವತ ಹಾಗೂ ಸಾಮೂಹಿಕ ಕ್ರಿಯೆಯಾಗಿ ಪರಿವರ್ತಿಸಲು ಅವರಿಗೆ ಯಾವುದೇ ಸಾಧ್ಯತೆ ಇಲ್ಲ. ಕ್ವಚಿತ್ತಾದ, ಅನುದ್ದೇಶಪೂರ್ವಕ ಹಾಗೂ ಪ್ರಬಲವಾಗಿ ಸ್ಥಳೀಕೃತ - ಇವು ಪಟ್ಟು ಬಿಡದ ಚಳವಳಿ ಮತ್ತು ಇನ್ನಿತರ ವಿಧದ ಕಾರ್ಮಿಕರ ಪ್ರತಿಭಟನೆಯ ಗುಣವೈಶಿಷ್ಟ್ಯಗಳು. “weapons of the weak (ವೆಪನ್ಸ್ ಆಫ್ ದ ವೀಕ್ (ದುರ್ಬಲರ ಅಸ್ತ್ರ))” (Scott (ಸ್ಕಾಟ್), 1985)ದಲ್ಲಿ ಭೂರಹಿತರು ತಮ್ಮ ಅಸಮಾಧಾನ ಹಾಗೂ ಹೋರಾಟದ ಸ್ವಭಾವವನ್ನು ಪ್ರತ್ಯೇಕ

ಶೈಲಿಯಲ್ಲಿ ವ್ಯಕ್ತಪಡಿಸುವ ಅನೇಕ ರೀತಿಯ ಕ್ರಿಯೆಗಳು ಹಾಗೂ ಮನೋಭಾವನೆಗಳನ್ನೂ ಸಹ ಒಳಗೊಂಡಿದೆ. ಗ್ರಾಮೀಣ ಶ್ರೀಮಂತ ವರ್ಗದವರ ಜೊತೆಗೆ ನೇರವಾಗಿ ಸಂಘರ್ಷಕ್ಕಿಳಿಯಲು ಸಮ್ಮತಿ ಇರುವುದು ರೈತ ಬಂಡವಾಳಶಾಹಿಗಳ ವ್ಯಾಪಾರ ವರ್ಗದ ಆರ್ಥಿಕ, ರಾಜಕೀಯ ಹಾಗೂ ಸಾಮಾಜಿಕ ಪ್ರಾಬಲ್ಯಕ್ಕೆ ಸವಾಲು ಎದುರಾಗುತ್ತಿರುವುದರ ಸೂಚನೆ ಆಗಿದೆ (ಬ್ರೆಮನ್, 1985a).

## ಕಾರ್ಮಿಕ ಅಲೆಮಾರಿಗಳು

ನಾನೀಗ ವಲಸೆ ಕಾರ್ಮಿಕರನ್ನು ಕುರಿತು ಚರ್ಚಿಸುತ್ತೇನೆ. ಭಾರತದ ನಾನಾ ಕಡೆ ಹೊಮ್ಮಿದ ಆರ್ಥಿಕ ಬೆಳವಣಿಗೆಯ ಕೇಂದ್ರಬಿಂದುಗಳ ಪ್ರೇರಿತ ಸೆಳೆತವು ಭಾರಿ ಪ್ರಮಾಣದ ಕಾರ್ಮಿಕರ ಪರಿಚಲನೆಗೆ ಏಕ ಮಾತ್ರ ಕಾರಣವಲ್ಲ. ಸ್ವಪ್ರಾಂತ್ಯದಲ್ಲಿನ ಸಂಪನ್ಮೂಲಗಳ ಮೇಲಿನ ಒತ್ತಡದಿಂದಾದ ಹೊರದೂಡುವಿಕೆಯು ವಲಸೆಗೆ, ಅದರಲ್ಲೂ ಕೃಷಿ ಶ್ರೇಣೀಕರಣದ ಕೆಳ ಹಂತದಲ್ಲಿರುವವರ ವಲಸೆಗೆ ಪ್ರಮುಖ ಕಾರಣವಾಗಿದೆ. ಇದಕ್ಕೆ ಜನಸಂಖ್ಯೆ ಹೆಚ್ಚಳ ಭಾಗಶಃ ಕಾರಣವಾಗಿದ್ದರೂ, ಇನ್ನೂ ಬೇರೆ ಕಾರಣಗಳಿವೆ. ವಲಸೆ ಕಾರ್ಮಿಕರಿಗೆ ತಮ್ಮ ಸ್ವಂತ ಗ್ರಾಮದಲ್ಲಿ ಕೆಲಸ ಸಿಗುವುದನ್ನು ಅಸಾಧ್ಯವಾಗಿಸುವ ಗ್ರಾಮೀಣ ಪಾರಿಸರಿಕ ಪರಿಸ್ಥಿತಿಯು ಅವರು ದಕ್ಷಿಣ ಗುಜರಾತಿನ ಬಯಲು ಪ್ರದೇಶಕ್ಕೆ ಪ್ರತಿವರ್ಷ ಭಾರಿ ಸಂಖ್ಯೆಯಲ್ಲಿ ಆಗಮಿಸಲು ಕಾರಣವಾಗಿದೆ. ಹಿನ್ನಾಡಿನಲ್ಲಿ ಮಳೆಯ ವೈಫಲ್ಯವಲ್ಲದೆ ಕಳೆದ ಹಲವು ದಶಕದಿಂದ ನಡೆದ ಭಾರಿ ಪ್ರಮಾಣದ ಮರ ಕಡಿಯುವಿಕೆಯಿಂದಾದ ಪರಿಸರ ನಾಶದಿಂದ ಆಗಾಗ ನೀರಿನ ಕೊರತೆ ಆವರ್ತಿಸುತ್ತದೆ. ಅರಣ್ಯ ನಾಶದಿಂದ ಬರಿದಾದ ಬರಡು ನೆಲ ಅನಿಶ್ಚಿತವಾದ ಮಳೆಗೆ ತೆರೆದುಕೊಳ್ಳುತ್ತದೆ; ಇದರ ಪರಿಣಾಮವಾಗಿ, ಎಂದಿಗೂ ಫಲವತ್ತಾಗಿರದ ಭೂಮಿಯ ಉತ್ಪಾದಕತೆ ಈಗ ಇನ್ನಷ್ಟು ಕಡಮೆಯಾಗಿದೆ.

ಬಯಲಿನ ಶ್ರೀಮಂತ ರೈತರಿಗೆ ಬಹಳಷ್ಟು ಲಾಭ ನೀಡುವ ನೂತನ ನೀರಾವರಿ ಕೃಷಿ ವ್ಯವಸ್ಥೆಯಿಂದಾಗಿ ನೀರಿನ ಮೂಲವಾಗಿರುವ ಪ್ರಾಂತ್ಯದಿಂದ ಕಾರ್ಮಿಕ ಶ್ರಮದ ವಾಸ್ತವ ನಿರ್ಗಮನವು ವಿರೋಧಾಭಾಸವಾಗಿದೆ. ತಪತಿ ನದಿಯ ಮೇಲೆ ಕಟ್ಟಿದ ಅಣೆಕಟ್ಟು ಸೃಷ್ಟಿಸಿದ ಕೃತಕ ಸರೋವರವು ಅಸಂಖ್ಯಾತ ಆದಿವಾಸಿ ಕೃಷಿಕರ ಜಮೀನನ್ನು ಕಸಿದುಕೊಂಡಿತು. ಅವರಿಗೆ ಕೊಳಕಾದ ವಸತಿ ಕಾಲನಿಗಳಲ್ಲಿ ಪುನರ್ವಸತಿ ಕಲ್ಪಿಸಲಾಯಿತು. ಈ ಮಾಜಿ ರೈತರಿಗೆ ಜೀವನಾಧಾರ ಇಲ್ಲವಾದ್ದರಿಂದ, ನೀರನ್ನು ಹಿಂಬಾಲಿಸಿ ಬಯಲಿಗೆ ತೆರಳಿ ತಮ್ಮ ದೈಹಿಕ ಬಲವನ್ನು ಮಾರವುದರ ಹೊರತಾಗಿ ಬೇರೆ ದಾರಿಯಿಲ್ಲ. ಅವರ ಈ ಅರೆ ಕಾರ್ಮಿಕೀಕರಣ ರಾಜ್ಯ ಅಳವಡಿಸಿಕೊಂಡ ಅಭಿವೃದ್ಧಿ ಕಾರ್ಯನೀತಿಯ ನೇರವಾದ ಪರಿಣಾಮವಾಗಿದೆ. ಸ್ಥಳೀಯ ಸರ್ಕಾರಗಳು ಹಿನ್ನಾಡಿನಲ್ಲಿ ಸಾರ್ವಜನಿಕ ಕಾಮಗಾರಿಗಳ ಮೂಲಕ ಉದ್ಯೋಗದ ಕೊರತೆಯನ್ನು ನಿವಾರಿಸಲು ಮುಂದಾದರೂ, ಅಂಥ ಯೋಜನೆಗಳ ಸಂಖ್ಯೆ, ಅವಧಿ ಮತ್ತು ಗಾತ್ರ ಈ ಉದ್ದೇಶಕ್ಕೆ ಏನೇನೂ ಸಾಲದು.

ಕಾರ್ಮಿಕರ ಚಲನೆಯು ಸಾಮಾನ್ಯವಾಗಿ ಗ್ರಾಮಾಂತರ ಪ್ರದೇಶದಿಂದ ನಗರಗಳಿಗೆ ವಲಸೆಯನ್ನು ಒಳಗೊಂಡಿರುತ್ತದೆ. ಇದು ಎಷ್ಟರ ಮಟ್ಟಿಗೆ ಇದೆಯೆಂದರೆ, ಹೆಚ್ಚಿನ ಲೇಖಕರು ವಲಸೆಯು ನಗರೀಕರಣಕ್ಕೆ ಸಮಾನಾರ್ಥಕ ಎಂದು

ಪರಿಗಣಿಸುತ್ತಾರೆ. ಇದು ಸರಿಯಲ್ಲ. ಏಕೆಂದರೆ, ಗ್ರಾಮೀಣ ಆರ್ಥಿಕತೆಯಿಂದ ಹೊರದೂಡಲ್ಪಟ್ಟ ಹೆಚ್ಚಿನವರು ಗ್ರಾಮೀಣ ಪ್ರದೇಶದಲ್ಲೇ ಇರುವುದನ್ನು ಮುಂದುವರಿಸುತ್ತಾರೆ. ಸೂರತ್ ಜಿಲ್ಲೆಗೆ ಬಂದ ಭೂಮಿ-ಬಡ ರೈತರಲ್ಲಿ ಕೆಲವರು ಅಲ್ಲಿ ಶಾಶ್ವತವಾಗಿ ನೆಲೆಸಿದ್ದಾರೆ ಎಂದು ತೋರುತ್ತದೆ. ಆದಾಗ್ಯೂ, ಹೆಚ್ಚಿನ ವಲಸೆಗಾರರು ಬಯಲು ಪ್ರದೇಶಕ್ಕೆ ಕೆಲವೊಮ್ಮೆ ಪ್ರತಿ ವರ್ಷ ಋತುಕಾಲಿಕ ಕಾರ್ಮಿಕರಾಗಿ ತೆರಳುತ್ತಾರೆ. ಇಂಥ ಗ್ರಾಮೀಣ ಪ್ರದೇಶದೊಳಗಿನ ವಲಸೆಯು ಅಭಿವೃದ್ಧಿ ಮಟ್ಟದಲ್ಲಿನ ಪ್ರಾಂತೀಯ ಅಸಮಾನತೆಯ ಹೆಚ್ಚಳದಿಂದ ಸಂಭವಿಸುತ್ತದೆ; ಈ 'ಕಾರ್ಮಿಕ ಅಲೆಮಾರಿಗಳು' ಅಸಮಾನತೆಯನ್ನು ಇನ್ನಷ್ಟು ವರ್ಧಿಸುತ್ತಾರೆ. ಮತ್ತೆ, ದಕ್ಷಿಣ ಗುಜರಾತಿನಲ್ಲಿ ಕಬ್ಬಿನ ಕಟಾವಿಗೆ ವಲಸೆ ಕಾರ್ಮಿಕರ ಭಾರೀ ಬಳಕೆಯು ಇದನ್ನು ಸ್ಪಷ್ಟವಾಗಿ ವಿವರಿಸುತ್ತದೆ.

ಮಧ್ಯ ಬಯಲು ಪ್ರದೇಶದಲ್ಲಿ ಕೃಷಿ ಜನಸಂಖ್ಯೆಯಲ್ಲಿ ಬಹುಸಂಖ್ಯಾತರಾಗಿರುವ ದೇಶಿ ಕಾರ್ಮಿಕರು ಕಡಮೆ ಬಳಕೆಯಾಗುತ್ತಿರುವ ಹಿನ್ನೆಲೆಯಲ್ಲಿ ವಲಸೆ ಕಾರ್ಮಿಕರ ಉಪಸ್ಥಿತಿಯು ಆಶ್ಚರ್ಯಕರ ವಿಷಯ ಎನ್ನಬಹುದು. ಭೂ ಮಾಲೀಕರು ಹಾಗೂ ಇನ್ನಿತರ ಗ್ರಾಮೀಣ ಉದ್ಯೋಗದಾತರು ಹೊರಗಿನವರನ್ನು ಅವಲಂಬಿಸಲು ಏಕೆ ಬಯಸುತ್ತಾರೆ? ಸ್ಥಳೀಯ ಭೂ ಕಾರ್ಮಿಕರು ಅಸಮರ್ಥರು, ಸೋಮಾರಿಗಳು, ಉದಾಸೀನ ಮಾಡುತ್ತಾರೆ, ದೈಹಿಕವಾಗಿ ದುರ್ಬಲರು, ಅಧಿಕಪ್ರಸಂಗಿಗಳು ಮತ್ತು ನಂಬಿಕೆ ಅರ್ಹರಾದವರಲ್ಲ ಎಂದು ರೈತ ಉದ್ಯಮಿಗಳು ಹೇಳುತ್ತಾರೆ. ಈ ಪದಗಳು ಕಡಮೆ ಅಂತಸ್ತಿನವರಂತೆ ವರ್ತಿಸುವುದನ್ನು ಮುಂದುವರಿಯಲು ನಿರಾಕರಿಸಿದ್ದಕ್ಕಾಗಿ ಆರ್ಥಿಕ ನಿಷೇಧದ ಮೂಲಕ ಶಿಕ್ಷೆಗೊಳಪಟ್ಟಿರುವ ಸಾಮಾಜಿಕ ವರ್ಗವೊಂದರ ಸದಸ್ಯರುಗಳಾದ ಹಲ್ಪತಿಗಳ ಮೇಲಿನ ದ್ವೇಷವನ್ನು ತೋರಿಸುತ್ತದೆ. ಆದಾಗ್ಯೂ, ಅವರನ್ನು ಹೊರಗಿನ ಕಾರ್ಮಿಕರಿಂದ ಬದಲಿಸುವುದು ಕೂಡ ಪ್ರಾಥಮಿಕವಾಗಿ ಹೆಚ್ಚು ವ್ಯಾವಹಾರಿಕ ಆರ್ಥಿಕ ಪರಿಗಣನೆಗಳಿಂದಾಗಿರುತ್ತದೆ. ವಲಸೆಗಾರರು ನೀಡುವ ಕಾರ್ಮಿಕಬಲವು ಸಂಪೂರ್ಣವಾಗಿ ಹಾಗೂ ಬೇಷರತ್ತಾಗಿ ಅತ್ಯಂತ ಕಡಮೆ ವೇತನಕ್ಕೆ ವಾರ್ಷಿಕ ಕಟಾವು ಅವಧಿಯುದ್ದಕ್ಕೂ ಲಭಿಸುತ್ತದೆ.

ಹಿನ್ನಾಡಿನ ಕಾರ್ಖಾನೆಗಳ ಏಜೆಂಟರು ಕಾರ್ಮಿಕ ದಲ್ಲಾಳಿಗಳೊಂದಿಗೆ ಒಂದು ಷರತ್ತಿನೊಂದಿಗೆ ಒಪ್ಪಂದಗಳನ್ನು ಮಾಡಿಕೊಳ್ಳುತ್ತಾರೆ. ಅಂದರೆ, ಮಳೆಗಾಲದ ಕೊನೆಯಲ್ಲಿ ದಲ್ಲಾಳಿಗಳು ಈ ಹಿಂದಿನ ತಿಂಗಳುಗಳಲ್ಲಿ ಗುತ್ತಿಗೆ ಒಪ್ಪಂದ ಮಾಡಿಕೊಂಡ ನಿರ್ದಿಷ್ಟ ಸಂಖ್ಯೆಯ ಕಬ್ಬು ಕಟಾವೆ ಮಾಡುವವರೊಂದಿಗೆ ಬಯಲು ಪ್ರದೇಶಕ್ಕೆ ಪ್ರಯಾಣಿಸುವುದಾಗಿ ಏಜೆಂಟರು ಷರತ್ತು ವಿಧಿಸುತ್ತಾರೆ. ಈ ಕಾರ್ಮಿಕ ದಲ್ಲಾಳಿಗಳು ಅನಂತರ ಕೂಟ (ಗ್ಯಾಂಗ್)ದ ಮುಂದಾಳಿನಂತೆ ಕಾರ್ಯ ನಿರ್ವಹಿಸುತ್ತಾರೆ: ತಾವು ನೇಮಿಸಿಕೊಂಡ ಕಾರ್ಮಿಕರಿಗೆ ಉತ್ತರದಾಯಿಯಾಗಿರುತ್ತಾರೆ ಮತ್ತು ಕಬ್ಬು ಕಟಾವುದಾರರು ತಾತ್ಕಾಲಿಕವಾಗಿ ವಾಸಿಸಲು ಹೂಡುವ ಬಯಲು ಶಿಬಿರಗಳ ಮೇಲುಸ್ತುವಾರಿ ವಹಿಸುತ್ತಾರೆ. ಅಂತಿಮವಾಗಿ, ಋತುಮಾನದ ಅಂತ್ಯವಾದ ಮೇ ತಿಂಗಳ ಆರಂಭದಲ್ಲಿ ತಮ್ಮ ಗುಂಪಿನೊಂದಿಗೆ ಬಯಲು ಪ್ರದೇಶವನ್ನು ತೊರೆಯುವುದಾಗಿ ಕಟ್ಟುಪಾಡು ವಿಧಿಸಿಕೊಳ್ಳುತ್ತಾರೆ. ಕಬ್ಬು ಕಟಾವು ಪ್ರಾರಂಭಿಸಿದ ಕೂಡಲೇ ಕಾರ್ಖಾನೆಗಳು ಹಗಲು ರಾತ್ರಿ ಕಾರ್ಯ ನಿರ್ವಹಿಸುತ್ತವೆ. ಕಬ್ಬನ್ನು ಹಗಲು

ಮಾತ್ರ ಕಟಾವು ಮಾಡಲಾಗುತ್ತದೆ. ಆದರೆ, ಇಡೀ ರಾತ್ರಿ ಸಾಗಣೆ ಮುಂದುವರಿಯುತ್ತದೆ. ಉತ್ಪಾದನೆ ನಿಲ್ಲದಂತೆ ನೋಡಿಕೊಳ್ಳಲು, ಎತ್ತಿನ ಗಾಡಿ, ಟ್ರ್ಯಾಕ್ಟರ್ ಮತ್ತು ಲಾರಿಗಳಿಗೆ ಕಬ್ಬು ತುಂಬಲು ಕೆಲಸಗಾರರು ರಾತ್ರಿ ಅನೇಕ ಸಲ ಗದ್ದೆಗೆ ಹಿಂತಿರುಗಬೇಕಾಗುತ್ತದೆ. ಏಳು ತಿಂಗಳ ಅವಧಿಯಲ್ಲಿ ಕೆಲಸದ ಅವಧಿ ದಿನವೊಂದಕ್ಕೆ ಅಂದಾಜು ಹತ್ತರಿಂದ ಹದಿನೈದು ಗಂಟೆ ಆಗಿರುತ್ತದೆ. ಕಾರ್ಮಿಕರಿಗೆ ಹದಿನೈದು ದಿನಕ್ಕೊಮ್ಮೆ ವಿಶ್ರಾಂತಿಗೆಂದು ಒಂದು ದಿನ ರಜಾ ಕೊಡುತ್ತಾರಾದರೂ, ಅದು ಈ ದೇಹವನ್ನು ದಣಿಸುವ ಕಾರ್ಯಾವಧಿಗೆ ವಿಶೇಷ ವಿನಾಯಿತಿ ಆಗಿರುವುದಿಲ್ಲ. ಬದಲಿಗೆ, ಆ ರಜೆ ಕೂಡ ಕಾರ್ಖಾನೆಯನ್ನು ಶುಚಿಗೊಳಿಸುವ ಅವಶ್ಯಕತೆಯ ಕಾರಣದಿಂದಾಗಿ ನೀಡುವಂತದ್ದಾಗಿರುತ್ತದೆ.

ಅಪರಿಚಿತ ಪ್ರದೇಶದಲ್ಲಿ ಜೀವಿಸುತ್ತಾ, ಜಮೀನು ಮತ್ತು ಶಿಬಿರದಲ್ಲಿ ಕಾರ್ಖಾನೆಯ ನಿರ್ದೇಶನವನ್ನು ಚಾಚೂ ತಪ್ಪದೆ ಪಾಲಿಸುವುದಾಗಿ ಭರವಸೆ ನೀಡಿದ ಕೂಟದ ಮುಖಂಡನ ಮೇಲುಸ್ತುವಾರಿಯಿಂದಾಗಿ, ಕಾರ್ಮಿಕ ಅಲೆಮಾರಿಗಳಿಗೆ ದೈನಂದಿನ ಕೆಲಸ ಮುಗಿದ ಬಳಿಕವೂ ನೆಮ್ಮದಿಯಿಂದ ತಲೆಯೂರಲು ಸ್ಥಳ ಇರುವುದಿಲ್ಲ. ಇವರಿಗೆ ಹೋಲಿಸಿದರೆ, ಸ್ಥಳೀಯ ಭೂರಹಿತರ ಮೇಲಿನ ನಿಯಂತ್ರಣವು ಹೆಚ್ಚು ಕಷ್ಟ. ಏಕೆಂದರೆ, ಅವರಿಗೆ ತಮ್ಮದೇ ಆದ ಸಾಮಾಜಿಕ ಜೀವನ ಹೊಂದುವುದನ್ನು ನಿರಾಕರಿಸಲು ಆಗುವುದಿಲ್ಲ. ಮೊದಲಿಗೆ, ಬಯಲು ಪ್ರದೇಶದ ಕೃಷಿ ಕಾರ್ಮಿಕರಿಗೆ ಗೃಹಕೃತ್ಯಗಳಿದ್ದು, ಅವುಗಳಿಗೆ ಸಮಯ ಕೊಡಬೇಕಾಗುತ್ತದೆ. ಕೆಲವು ವರ್ಷಗಳ ಹಿಂದೆ ಸಾಕಷ್ಟು ಹಿಂಜರಿಕೆಯ ನಡುವೆಯೇ ಸಹಕಾರ ಸಕ್ಕರೆ ಕಾರ್ಖಾನೆಯೊಂದು ಸ್ಥಳೀಯ ಗಾಂಧಿವಾದಿ ಚಳವಳಿಯ ಮುಖ್ಯಸ್ಥರ ಮನವಿ ಮೇರೆಗೆ ಕೆಲವು ಸ್ಥಳೀಯ ಕೃಷಿ ಕಾರ್ಮಿಕರನ್ನು ಕಬ್ಬು ಕಟಾವಿಗೆ ನೇಮಿಸಿಕೊಂಡಿತು. ಆದರೆ ಹಲ್ಪತಿಗಳು ರಾತ್ರಿ ವೇಳೆಯೂ ಕೆಲಸ ಮಾಡಲು ನಿರಾಕರಿಸಿದ್ದರಿಂದ, ಈ ಪ್ರಯೋಗವು ಶೀಘ್ರದಲ್ಲೇ ಅಂತ್ಯಗೊಂಡಿತು.

ಇಬ್ಬರು ತರುಣಾವಸ್ಥೆಯ ಅಥವಾ ಸಾಮಾನ್ಯವಾಗಿ ಒಬ್ಬ ಪುರುಷ ಮತ್ತು ಒಬ್ಬಳು ಮಹಿಳೆಯನ್ನು ಒಳಗೊಂಡ ವಯಸ್ಕ ಸದಸ್ಯರ ತಂಡಕ್ಕೆ ಪ್ರತಿ ಟನ್ ಕಬ್ಬು ಕತ್ತರಿಸಿದ್ದಕ್ಕೆ ನಿರ್ದಿಷ್ಟ ಮೊತ್ತವನ್ನು ನೀಡಲಾಗುತ್ತದೆ. ಮಧ್ಯಸ್ತಿಕೆ ವಹಿಸಿದ್ದಕ್ಕಾಗಿ ತನ್ನ ತಂಡ ಗಳಿಸುವ ಆದಾಯದಲ್ಲಿ ಶೇ.10ರಷ್ಟು ಮೊತ್ತ ದಲ್ಲಾಳಿಗೆ ಸಿಗುತ್ತದೆ. ಇದನ್ನು ದಿನದ ಕೂಲಿಗೆ ಪರಿವರ್ತಿಸಿದರೆ, ಕಬ್ಬು ಕತ್ತರಿಸುವವರಿಗೆ ನೀಡುವ ಕೂಲಿಯು ಬಯಲು ಪ್ರದೇಶದಲ್ಲಿ ಕೃಷಿ ಕಾರ್ಮಿಕರು ತಮ್ಮ ಹಕ್ಕು ಸಾಧಿಸಿ ಪಡೆಯಬಹುದಾದ ಕನಿಷ್ಠ ಕೂಲಿಗಿಂತ ಕಡಮೆ ಇರುತ್ತದೆ.

ಕಾರ್ಮಿಕರು ಗುಂಪಾಗಿ ಆಗಮಿಸಿದ ತತ್‌ಕ್ಷಣ ಅವರಿಗೆ ಎರಡು ಚಾಪೆ ಮತ್ತು ನೆರಳು ನಿರ್ಮಿಸಿಕೊಳ್ಳಲು ಕೆಲ ಬಿದಿರಿನ ಕೋಲುಗಳನ್ನು ನೀಡಲಾಗುತ್ತದೆ. ಈ ಗುಡಾರವನ್ನು ಹೋಲುವ ನಿರ್ಮಿತಿಗಳಿಗೆ 'ಗುಡಿಸಲು' ಎನ್ನುವ ಪದ ಭವ್ಯವಾದದ್ದಾಗಿದ್ದು, ಪುರುಷ, ಆತನ ಪತ್ನಿ ಹಾಗೂ ಮಕ್ಕಳಿಗೆ ಸ್ಥಳಾವಕಾಶ ನೀಡಲಾಗದಷ್ಟು ಕಿರಿದಾಗಿರುತ್ತದೆ. ವಯಸ್ಕರು ಸಾಮಾನ್ಯವಾಗಿ ರಾತ್ರಿಯೂಟ ಬೇಯಿಸಲು ಹೊತ್ತಿಸಿದ ಬೆಂಕಿ ಸುತ್ತ ಬಯಲಿನಲ್ಲಿ ಮಲಗುತ್ತಾರೆ. ತಾತ್ಕಾಲಿಕ ಶಿಬಿರಗಳನ್ನು ಹೂಡಲು ಇಂಥ ಹಲವು ಗುಡಿಸಲುಗಳ ಗುಂಪುಗಳಿಗೆ ನೀಡಿರುವ

ಜಮೀನು ಅಥವಾ ರಸ್ತೆ ಬದಿಯು ಶಿಬಿರದಂತೆ ಕಂಡುಬರುತ್ತದೆ. ಆದರೆ, ಇಲ್ಲಿ ಕುಡಿಯುವ ನೀರು, ಬಚ್ಚಲು ಅಥವಾ ಇನ್ನಿತರ ಶೌಚ ವ್ಯವಸ್ಥೆ ಇರುವುದಿಲ್ಲ. ವಲಸಿಗರು ನೆರೆಹೊರೆಯ ಕಬ್ಬಿನ ಗದ್ದೆಗಳ ಕಟಾವು ಆದ ಬಳಿಕ ಇನ್ನೊಂದೆಡೆಗೆ ಚಲಿಸುತ್ತಾರೆ ಮತ್ತು ಹೊಸ 'ಶಿಬಿರ' ಕಟ್ಟಿಕೊಳ್ಳುತ್ತಾರೆ. ಕೆಲವು ಕಾಲ ಒಂದೇ ಬಿಡಾರದಲ್ಲಿದ್ದ ವಲಸಿಗರು ನಂತರ ಅದೇ ಋತುವಿನಲ್ಲಿ ಮತ್ತೆ ಪರಸ್ಪರ ಭೇಟಿಯಾಗುವುದನ್ನು ತಪ್ಪಿಸಲು ಬೇರೆ ಬೇರೆ ಕಡೆಗೆ ಚಲಿಸುತ್ತಾರೆ. ಈ ನಿರಂತರ ಆವರ್ತವು ಕಬ್ಬು ಕಟಾವುದಾರರ ಅಲೆಮಾರಿ ಜೀವನದ ಗುಣವೈಶಿಷ್ಟ್ಯ.

ನಿರ್ದಿಷ್ಟವಾಗಿ ಹೇಳಬೇಕೆಂದರೆ, ಮಹಿಳೆಯರು ಅತಿ ಕಠಿಣ ಜೀವನ ಸಾಗಿಸುತ್ತಾರೆ. ಸಾಮಾನ್ಯವಾಗಿ ಕಬ್ಬು ಕತ್ತರಿಸುವಿಕೆ ಪುರುಷರ ಕೆಲಸವಾದರೂ, ತಂಡದ ಸಹಭಾಗಿ, ಸಾಮಾನ್ಯವಾಗಿ ಆತನ ಪತ್ನಿ, ಆತನಿಗೆ ವಿಶ್ರಾಂತಿ ನೀಡಲೆಂದು ಕೆಲಸಕ್ಕೆ ಕೈ ಹಚ್ಚುತ್ತಾಳೆ. ಕಬ್ಬಿನ ಎಲೆಗಳನ್ನು ತೆಗೆಯುವುದು, ತುಂಡುಗಳಾಗಿ ಕತ್ತರಿಸುವುದು, ಹೊರೆ ಕಟ್ಟುವುದು ಮತ್ತು ಅವುಗಳನ್ನು ಗದ್ದೆಯಲ್ಲಿ ಹರಡಿ ಸಾಗಣೆಗೆ ಸಿದ್ಧಪಡಿಸುವುದು – ಇವೆಲ್ಲವೂ ಸಹ ಆಕೆಯ ಕೆಲಸವಾಗಿರುತ್ತದೆ. ಪುರುಷರು ಸುಸ್ತಾಗಿ ಒರಗಿ ಮೌನವಾಗಿದ್ದಾಗ ಇಲ್ಲವೇ ಬೀಡಿ ಸೇದುತ್ತಿದ್ದಾಗ ಮಹಿಳೆಯರು ತಮ್ಮೊಟ್ಟಿಗೆ ಬಂದ ಮಕ್ಕಳನ್ನು ನೋಡಿಕೊಳ್ಳಬೇಕಾಗುತ್ತದೆ ಮತ್ತು ಎಳೆ ಮಗುವಿಗೆ ಹಾಲೂಡಿಸಬೇಕಾಗುತ್ತದೆ. ದಿನದ ಕೊನೆಯಲ್ಲಿ ಕಾರ್ಮಿಕರು ಶಿಬಿರಕ್ಕೆ ಹಿಂದಿರುಗಬೇಕಾದರೆ, ಮಹಿಳೆಯರು ಆಹಾರ ಬೇಯಿಸಲು ಉರುವಲಿನ ಹೊರೆಯನ್ನು ಹೊತ್ತು ತರುತ್ತಾರೆ. ಅಂತಿಮವಾಗಿ, ಶಿಬಿರ ತಲಪಿದ ಬಳಿಕ ಅಡುಗೆ ತಯಾರಿ, ತೊಳೆಯುವಿಕೆ ಇತ್ಯಾದಿ ಕೆಲಸಗಳಲ್ಲಿ ಮಹಿಳೆಯರು ತೊಡಗಿಕೊಳ್ಳುತ್ತಾರೆ.

ಮಳೆಗಾಲದ ತಿಂಗಳುಗಳಲ್ಲಿ ಜೀವನ ನಿರ್ವಹಣೆಗೆ ಹಣ ಉಳಿಸುವ ಭರವಸೆಯಿಂದ ದಕ್ಷಿಣ ಗುಜರಾತಿಗೆ ತೆರಳುವ ಕಬ್ಬು ಕಟಾವುದಾರರಿಗಿಂತ, ಅವರನ್ನು ಅವಲಂಬಿಸಿದ, ಹಿನ್ನಾಡಿನಲ್ಲಿ ಉಳಿದುಕೊಂಡ ಕುಟುಂಬದ ಸದಸ್ಯರು ಅನುಭವಿಸುವ ದಾರಿದ್ರ್ಯವು ಪ್ರಾಯಃ ಭೀಕರವಾಗಿರುತ್ತದೆ. ವಯಸ್ಸಿಗೆ ಬಾರದ ಅಥವಾ ವಯಸ್ಸಿನ ಕಾರಣದಿಂದ ಕಬ್ಬಿನ ಕಟಾವಿನಲ್ಲಿ ಭಾಗವಹಿಸಲು ಸಾಧ್ಯವಿರದÀ ಅನಿವಾರ್ಯವಾಗಿ ಹಿನ್ನಾಡಿನಲ್ಲಿ ಉಳಿದುಕೊಳ್ಳುವ ದುರ್ಬಲರು ಸಣ್ಣ ಮಕ್ಕಳು ಮತ್ತು ವಯಸ್ಸಾದವರು ಆಗಿರುತ್ತಾರೆ. ಅವರ ಕಾರ್ಮಿಕ ಬಲ ಅನುಪಯುಕ್ತ ಮತ್ತು ಗ್ರಾಹಕರಾಗಿ ಅವರು ಬಯಲು ಪ್ರದೇಶಕ್ಕೆ ಹೋಗಲು ಅನುಮತಿ ನೀಡಲಾಗುವುದಿಲ್ಲ. ಕಬ್ಬು ಕಟಾವುದಾರರ ಸೇನೆಯನ್ನು ನೋಡಿ ಮರುಕ ಪಡುವವರು ಮನೆಯಲ್ಲೇ ಉಳಿದುಕೊಳ್ಳಬೇಕಾಗಿ ಬಂದ ವಯಸ್ಸಾದವರು ಮತ್ತು ಸಣ್ಣ ಪ್ರಾಯದವರ ಪರಿಸ್ಥಿತಿ ಪ್ರಾಯಃ ಅತ್ಯಂತ ಕೆಟ್ಟದ್ದಾಗಿರುತ್ತದೆ ಎಂಬುದನ್ನು ತಿಳಿದುಕೊಳ್ಳಬೇಕು.

ವಲಸೆಗಾರರು ಹಿನ್ನಾಡನ್ನು ತೊರೆಯಲು ಮೂಲಭೂತವಾಗಿ ಆರ್ಥಿಕ ಒತ್ತಡ ಕಾರಣವಾದರೂ, ಋತುಮಾನ ಸೀಮಿತ ವಲಸೆಗೆ ಸಾಲದಿಂದಾದ ಪ್ರಸ್ತುತದ ಅವಲಂಬನೆಯ ಸಂಬಂಧಗಳು ಮುಖ್ಯವಾದ ಉತ್ತೇಜಕಗಳಾಗಿರಬಹುದು. ಆದಾಗ್ಯೂ, ಕಬ್ಬು ಕಟಾವುದಾರ ತನ್ನ ದಲ್ಲಾಳಿ ಜೊತೆಗೆ ಒಪ್ಪಂದ ಮಾಡಿಕೊಂಡ ತತ್‌ಕ್ಷಣ ಆತನ ಮುಕ್ತ ಆಯ್ಕೆಗಳು ಮೊಟಕುಗೊಳ್ಳುತ್ತವೆ. ಒಪ್ಪಂದದ ನಂತರ ಆತನಿಗೆ

ಮುಂಗಡ ಹಣ ಪಾವತಿಸಲಾಗುತ್ತದೆ ಮತ್ತು ಆದ್ದರಿಂದ, ಇಡೀ ಋತುಮಾನದಲ್ಲಿ ಕೆಲಸ ಮಾಡುವುದಾಗಿ ಆತ ಒಪ್ಪಿಕೊಳ್ಳುತ್ತಾನೆ. ಕಾರ್ಮಿಕ ದಲ್ಲಾಳಿಗಳು ತಮ್ಮ ಕೂಟಕ್ಕೆ ಸದಸ್ಯರನ್ನು ನೇಮಕ ಮಾಡಿಕೊಳ್ಳಲು ಅಗತ್ಯವಾದ ಮೊತ್ತವು ಕಾರ್ಖಾನೆ ಅವರಿಗೆ ಕೊಟ್ಟ ಮುಂಗಡಕ್ಕಿಂತ ಹೆಚ್ಚು ಇರುತ್ತದೆ. ಹೀಗಾಗಿ, ದಲ್ಲಾಳಿ ಲೇವಾದೇವಿದಾರನಿಂದ ಸಾಲ ಪಡೆದು ಕೊರತೆಯನ್ನು ಭರಿಸುತ್ತಾನೆ ಮತ್ತು ಇದರ ಹೆಚ್ಚು ಬಡ್ಡಿ ದರವನ್ನು ಸ್ವಾಭಾವಿಕವಾಗಿ ಕಾರ್ಮಿಕರ ಮೇಲೆ ವಿಧಿಸುತ್ತಾನೆ. ಇದರ ಪರಿಣಾಮವೇನೆಂದರೆ, ಕಬ್ಬು ಕಟಾವುದಾರ ಋತುಮಾನಕ್ಕೆ ಆರಂಭದಲ್ಲಿ ಪಡೆದ ಪ್ರತಿಯೊಂದು ರೂಪಾಯಿಗೆ ಅಂತ್ಯದಲ್ಲಿ ಎರಡು ರೂಪಾಯಿ ಮರುಪಾವತಿಸಬೇಕಾಗುತ್ತದೆ. ಋತುಮಾನದಲ್ಲಿ ವಲಸಿಗರು ಕೂಟದ ಮುಂದಾಳಿನಿಂದ ಸಣ್ಣ ಮೊತ್ತವನ್ನು ಎರವಲು ಪಡೆಯುವುದರಿಂದ ಅವರ ಸಾಲದ ಹೊರೆ ಹೆಚ್ಚುತ್ತ ಹೋಗುತ್ತದೆ. ವೇತನವನ್ನು ಕಟಾವು ಋತು ಮುಗಿದ ಬಳಿಕ, ಮನೆಗೆ ಮರಳುವ ಸಂದರ್ಭದಲ್ಲಿ ಕೊಡಲಾಗುತ್ತದೆ. ಪಾಕ್ಷಿಕಕ್ಕೊಮ್ಮೆ ಕೂಟದ ಸದಸ್ಯರಿಗೆ ಪಡಿತರ ಮತ್ತು ಖರ್ಚಿಗೆ ನಗದಿನ ರೂಪದಲ್ಲಿ (ಹೆಚ್ಚೆಂದರೆ ನಿತ್ಯ ತಲಾ ಒಂದೆರಡು ರೂಪಾಯಿ) ಜೀವನಾಧಾರ ಭತ್ಯೆಯನ್ನು ಕೊಡಲಾಗುತ್ತದೆ. ಇದು ಯಾವಾಗಲೂ ಅಸಮರ್ಪಕವಾಗಿದ್ದು ಅಂಥ ಸಂದರ್ಭದಲ್ಲಿ ಕೂಟದ ಮುಖ್ಯಸ್ಥ ಸಾಲ ನೀಡುತ್ತಾನೆ. ಇದರ ಪರಿಣಾಮ, ಆತ ಕಬ್ಬು ಕಟಾವುದಾರರಿಗೆ ಸಾಕಷ್ಟು ಹಣವನ್ನು ಸಾಲವಾಗಿ ನೀಡಿರುತ್ತಾನೆ. ಇದನ್ನು ಆತ ಕೂಟವನ್ನು ಶಿಸ್ತಿನಲ್ಲಿರಿಸುವ ಸ್ಪಷ್ಟ ಉದ್ದೇಶದಿಂದ ಮತ್ತು ಕಾರ್ಖಾನೆಯ ಮೌನಸಮ್ಮತಿಯೊಂದಿಗೆ ಮಾಡುತ್ತಾನೆ.

ಸಾಲ ನೀಡುವ ಮೂಲಕ ಕಾರ್ಮಿಕರನ್ನು ಜೀತಕ್ಕೆ ಒಳಪಡಿಸುವುದನ್ನು ಕಾನೂನು ನಿಷೇಧಿಸಿದ್ದರೂ, ದಕ್ಷಿಣ ಗುಜರಾತಿನ ಸಹಕಾರ ಉದ್ಯಮಗಳು ಇದೇ ಆಧಾರದಲ್ಲಿ ಕಾರ್ಮಿಕರನ್ನು ನೇಮಿಸಿಕೊಳ್ಳುತ್ತವೆ. ಕಾರ್ಮಿಕ ದಲ್ಲಾಳಿ-ಕೂಟದ ಮುಖ್ಯಸ್ಥ-ಶಿಬಿರದ ಮುಖ್ಯಸ್ಥನ ಹೂಡಿಕೆಯನ್ನು ಪರಿಗಣಿಸಿದರೆ, ಆತ ಕೆಲವೊಮ್ಮೆ ಹೇರುವ ಅಧಿಕ ಆರ್ಥಿಕ ಒತ್ತಡವನ್ನು ಅರ್ಥ ಮಾಡಿಕೊಳ್ಳಬಹುದು. ಕೊನೆಯ ಉಪಾಯವಾಗಿ, ಗುತ್ತಿಗೆಗೆ ಕರೆ ತಂದ ಕಬ್ಬು ಕಟಾವುದಾರರನ್ನು ಬಯಲಿಗೆ ಪ್ರಯಾಣ ಮಾಡಿಸಲು, ಮತ್ತು ಅಲ್ಲಿ ಬಂದ ನಂತರ, ಊರಿಗೆ ಅವಧಿಗೆ ಮುನ್ನವೇ ಹಿಂದಿರುಗುವುದನ್ನು ತಡೆಯಲು ದೈಹಿಕ ಹಿಂಸೆಯನ್ನು ಬಳಸಲಾಗುತ್ತದೆ. ಆದಾಗ್ಯೂ, ಹೆಚ್ಚು ಹಿಂಸೆ ಬಳಸುವ ದಲ್ಲಾಳಿಗಳ ಮೇಲೆ ಪ್ರತಿಹಿಂಸೆಯ ಸಾಧ್ಯತೆ ಇದ್ದು, ಕಬ್ಬು ಕಟಾವುದಾರರು ಹಠಾತ್ ಪ್ರವೃತ್ತಿಯ ಅವಿವೇಕಿಗಳು ಎಂದು ಕಾರ್ಖಾನೆಯ ಕ್ಷೇತ್ರಸಿಬ್ಬಂದಿ ಆಗಾಗ ವ್ಯಕ್ತಪಡಿಸುವ ಅಭಿಪ್ರಾಯಕ್ಕೆ ಬೆಂಬಲ ಸಿಕ್ಕಿದಂತಾಗುತ್ತದೆ. ಕಟಾವುದಾರರು ಒರಟು ನಿಂದನೆಗೆ ಅಸಮಾಧಾನ ಪಟ್ಟುಕೊಳ್ಳದಿದ್ದರೂ, ಕೆಲ ನಿರರ್ಥಕ ಕಾರಣಕ್ಕೆ ಸಿಡಿದೇಳಬಹುದು ಮತ್ತು ತಮ್ಮ ವೈರಿಯನ್ನು ಚಾಕುವಿನಿಂದ ತಿವಿದು ಗಾಯಗೊಳಿಸಬಹುದು ಇಲ್ಲವೇ ಕೊಲ್ಲಬಹುದು ಎಂದು ಅವರ ಬಗ್ಗೆ ಭಾವಿಸಲಾಗುತ್ತದೆ.

ಮೇಲೆ ಚರ್ಚಿಸಿದ ಒಂದು ರೀತಿಯ ಅವಲಂಬನೆಯ ಸಂಬಂಧಗಳು ಹಿಂದಿನ ಊಳಿಗಮಾನ್ಯ ಪದ್ಧತಿಯಲ್ಲಿನ ಮಾಲೀಕ ಮತ್ತು ಸೇವಕನ ಸಂಬಂಧದ ಮುಂದುವರಿಕೆ ಎಂದು ನಾನು ಪರಿಗಣಿಸುವುದಿಲ್ಲ. ಹೊರಹೊಮ್ಮಿದ ಈ ನೂತನ ಗುಲಾಮಗಿರಿಯು ಅಗತ್ಯವಾಗಿ ಬಂಡವಾಳಶಾಹಿ ಉತ್ಪಾದನಾ ಮಾದರಿಯ

ಅಭಿವೃದ್ಧಿಗೆ ವಿರುದ್ಧವಾಗಿಲ್ಲ. ಬೇರೆ ರೀತಿಯಲ್ಲಿ ಹೇಳುವುದಾದರೆ, ಕೆಲಸಕ್ಕೆ ನಿಯಮಗಳು ಮತ್ತು ಷರತ್ತುಗಳನ್ನು ಹಾಕುವ ಸ್ವಾತಂತ್ರ್ಯ ಇಲ್ಲದೇ ಇದ್ದರೂ ಕಾರ್ಮಿಕರು ಚಲನಶೀಲರಾಗುತ್ತಾರೆ. ಕೃಷಿ ಉದ್ಯಮವು ಕಾರ್ಮಿಕರನ್ನು ಕಾನೂನಿಗೆ ವಿರುದ್ಧವಾಗಿ ಜೀತದಲ್ಲಿರಿಸಿಕೊಂಡಿದೆ ಮತ್ತು ದಬ್ಬಾಳಿಕೆ ನಡೆಸುತ್ತಿದೆ ಎನ್ನುವ ಆರೋಪವನ್ನು ಸಹಜವಾಗಿಯೇ ಸಹಕಾರ ಸಂಘಗಳ ಆಡಳಿತ ಮಂಡಳಿಗಳು ನಿರಾಕರಿಸುತ್ತವೆ. ಕಬ್ಬು ಕಟಾವುದಾರರನ್ನು ಕೂಟದ ಮುಖ್ಯಸ್ಥ ನೇಮಕ ಮಾಡಿಕೊಂಡಿರುತ್ತಾನೆ ಮತ್ತು ಕಾರ್ಮಿಕಪಡೆಯ ನಡುವಿನ ಪರಸ್ಪರ ಸಂಬಂಧ ಕಾರ್ಖಾನೆಯ ನಿಯಂತ್ರಣದಲ್ಲಿ ಇರುವುದಿಲ್ಲ ಎಂದು ವಾದಿಸುತ್ತವೆ. ಆಡಳಿತ ವರ್ಗ ಮಧ್ಯಸ್ತಿಕೆದಾರರೊಂದಿಗೆ ಮಾತ್ರ ಒಪ್ಪಂದ ಮಾಡಿಕೊಂಡಿರುತ್ತದೆ ಮತ್ತು ಕೂಟದ ಮುಖ್ಯಸ್ಥ ಕಬ್ಬು ಕಟಾವುದಾರರೊಂದಿಗೆ ಮಾಡಿಕೊಂಡ ವ್ಯವಸ್ಥೆ ತನಗೆ ಸಂಬಂಧಿಸಿದ್ದಲ್ಲ ಎಂದು ಸಮರ್ಥಿಸಿಕೊಳ್ಳುತ್ತದೆ.

ಸರ್ಕಾರವು ಭಾರಿ ಪ್ರಮಾಣದ ವಲಸೆಗಾರರ ಒಳ ಹರಿವಿನ ವಿರುದ್ಧ ಸ್ಥಳೀಯ ಕಾರ್ಮಿಕರಿಗೆ ಯಾವುದೇ ಭದ್ರತೆ ನೀಡಿಲ್ಲ. ಅಲ್ಲದೆ, ವಲಸೆಗಾರರು ಅನುಭವಿಸುತ್ತಿರುವ ಶೋಷಣೆ ಮತ್ತು ದಬ್ಬಾಳಿಕೆಯನ್ನು ಕೊನೆಗೊಳಿಸಲು ಯಾವುದೇ ಅಧಿಕೃತ ಕ್ರಮವನ್ನೂ ತೆಗೆದುಕೊಂಡಿಲ್ಲ. ಹಾಲಿ ಕಾನೂನಿನಡಿ ಅಂಥ ಕ್ರಮ ತೆಗೆದುಕೊಳ್ಳಬಹುದಾದರೂ, ಅನುಷ್ಠಾನವು ಇಲ್ಲಿಯವರೆಗೆ ಅಸ್ತವ್ಯಸ್ತವಾಗಿದೆ. ಇದು ರಾಜ್ಯಗಳ ನಡುವೆ ಕಾರ್ಮಿಕರ ಚಲನವಲನಕ್ಕೆ ನಿರ್ಬಂಧ ಹೇರುವ ಕಾಯಿದೆ ಮತ್ತು ಕಾರ್ಮಿಕ ದಲ್ಲಾಳಿಗಳ ಮೇಲೆ ನಿರ್ಬಂಧ ಹೇರುವ ಕಾಯಿದೆ- ಎರಡಕ್ಕೂ ಅನ್ವಯಸಿದೆ. ಸಹಕಾರಿ ಸಕ್ಕರೆ ಕಾರ್ಖಾನೆಗಳ ಕೋರಿಕೆ ಮೇರೆಗೆ ಈ ಕಾಯಿದೆಗಳಿಂದ ಅಧಿಕೃತವಾಗಿ ವಿನಾಯಿತಿ ನೀಡಲಾಗಿದೆ. ಸಕ್ಕರೆ ಕಾರ್ಖಾನೆ ಮಾಲೀಕರು ಬೀರುತ್ತಿದ್ದ ಪ್ರಭಾವಕ್ಕೆ 1987ರಲ್ಲಿ ಗುಜರಾತ್ ಹೈಕೋರ್ಟ್ ನೇಮಿಸಿದ್ದ ತನಿಖಾ ಆಯೋಗಕ್ಕೆ ಲಭ್ಯವಾದ ಗುಪ್ತ ಒಪ್ಪಂದವೊಂದು ಸಾಕ್ಷಿ ಒದಗಿಸುತ್ತದೆ. ಅದು ಸೂರತ್ ಜಿಲ್ಲೆಯ ಗ್ರಾಮೀಣ ಕಾರ್ಮಿಕ ಪರೀಕ್ಷಾಧಿಕಾರವು ಕನಿಷ್ಠ ವೇತನ ನೀಡಲು ವಿಫಲವಾದ ಸಕ್ಕರೆ ಕಾರ್ಖಾನೆಗಳ ಆಡಳಿತಗಾರರ ಮೇಲೆ ಕಾನೂನು ಕ್ರಮ ತೆಗೆದುಕೊಳ್ಳುವುದನ್ನು ಸ್ಪಷ್ಟವಾಗಿ ನಿಷೇಧಿಸುತ್ತದೆ.

ತಮ್ಮ ಉದ್ಯೋಗದಾತರಂಥದ್ದೇ ಸಾಮಾಜಿಕ ಹಿನ್ನೆಲೆ ಹೊಂದಿರುವುದರಿಂದ ಕನಿಷ್ಠ ರಾಜಕೀಯ ಪ್ರಭಾವವನ್ನು ಹೊಂದಿರುವ ಸ್ಥಳೀಯ ಕೃಷಿ ಕಾರ್ಮಿಕರಿಗೆ ಹೋಲಿಸಿದರೆ, ಋತುಮಾನ ಸಂಬಂಧಿ ವಲಸೆ ಕಾರ್ಮಿಕರ ಭಾರಿ ಸೈನ್ಯ ಯಾವುದೇ ರಾಜಕೀಯ ಪ್ರಭಾವ ಹೊಂದಿರುವುದಿಲ್ಲ. ಗುಜರಾತ್ ಪ್ರಮುಖ ರಾಜಕಾರಣಿಯೊಬ್ಬರು ನನಗೆ ಹೇಳಿದ್ದರು: ಕಬ್ಬು ಕಟಾವುದಾರರು ತಮ್ಮ ಸ್ವಂತ ಗ್ರಾಮಗಳಲ್ಲಿ ಅಥವಾ ತಾವು ಕೆಲಸ ಮಾಡುತ್ತಿರುವಲ್ಲಿ ಮತ ಚಲಾಯಿಸುವುದಿಲ್ಲ. ಅದೇನೇ ಇದ್ದರೂ, ವಲಸೆ ಕಾರ್ಮಿಕರ ಸ್ಥಿತಿಗತಿಗೆ ಸಂಬಂಧಿಸಿದಂತೆ ಹೆಚ್ಚುತ್ತಿರುವ ಟೀಕೆಗೆ ಕೃಷಿ ಉದ್ಯಮಗಳು ಸಂಪೂರ್ಣ ಅಸೂಕ್ಷ್ಮವಾಗಿಲ್ಲ; ನಕಾರಾತ್ಮಕ ಪ್ರಚಾರದಿಂದಾಗಿ ಸರ್ಕಾರ ಕಾರ್ಮಿಕರ ಶೋಷಣೆಯನ್ನು ತಡೆಯಲು ನಿಯಂತ್ರಣಗಳನ್ನು ಬಿಗಿಗೊಳಿಸಬಹುದು ಎನ್ನುವ ಆತಂಕ ಅವುಗಳಿಗಿದೆ. ಆದರೆ, ಸರ್ಕಾರ ಈವರೆಗೆ ಅಂಥ ಯಾವುದೇ ಸರಿಪಡಿಸುವ ಉಪಕ್ರಮಗಳನ್ನು ತೆಗೆದುಕೊಳ್ಳದೆ ಇರುವುದನ್ನು ನೋಡಿದರೆ, ಇದಕ್ಕೆ ರಾಜ್ಯ ಮತ್ತು ಕೇಂದ್ರದ ಹಂತದಲ್ಲಿ ಕೃಷಿ

ಬಂಡವಾಳಶಾಹಿಗಳ ಒಕ್ಕೂಟ ಹೇರಿದ ಪ್ರಬಲ ಒತ್ತಡ ನಿಸ್ಸಂಶಯವಾಗಿ ಕಾರಣ ಎಂದು ಭಾವಿಸಬಹುದು.

ಬಯಲು ಪ್ರದೇಶದಲ್ಲಿ ತಾತ್ಕಾಲಿಕವಾಗಿ ನೆಲೆಸುವ ಕಬ್ಬು ಕಟಾವುದಾರರನ್ನು ಜಮೀನು ಹಾಗೂ ಶಿಬಿರಗಳಲ್ಲಿ ಸ್ಥಳೀಯ ಭೂರಹಿತರಿಂದ ಪ್ರತ್ಯೇಕಿಸಲಾಗುತ್ತದೆ ಮತ್ತು ಕಾರ್ಖಾನೆಗೆ ತನ್ನ ಪ್ರಾಥಮಿಕ ಸ್ವಾಮಿನಿಷ್ಠೆಯಿರುವ ಕೂಟದ ಮುಖ್ಯಸ್ಥ ಕಾರ್ಮಿಕರ ಗುಂಪನ್ನು ಒಟ್ಟಿಗೆ ಕೂಡಿ ಹಾಕಿ ವಿಧೇಯರಾಗಿರುವಂತೆ ನೋಡಿಕೊಳ್ಳುವುದರಿಂದ, ಅವರು ಸಾಮೂಹಿಕ ಪ್ರತಿರೋಧವನ್ನು ರೂಪಿಸಿಕೊಳ್ಳಲು ಅವಕಾಶಗಳು ಇರುವುದಿಲ್ಲ. ಅವರಿಗೆ ಒಂದೇ ರೀತಿಯ ಸಾಮಾನ್ಯ ಹಿನ್ನೆಲೆ ಕೂಡ ಇರುವುದಿಲ್ಲ. ಹತ್ತು ವರ್ಷಗಳ ಹಿಂದಿನ ಪರಿಸ್ಥಿತಿ ಬದಲಾಗಿದ್ದು, ಈಗ ಹೆಚ್ಚಿನ ಕೊಯ್ಲುಗಾರರು ಗುಜರಾತಿನಿಂದಲೇ ಬರುತ್ತಾರೆ - ನನ್ನ ಅಂದಾಜಿನ ಪ್ರಕಾರ, ಶೇ.30ರಷ್ಟು. ಬಹುತೇಕ ಎಲ್ಲ ಋತುಮಾನ ವಲಸೆಗಾರರು ಆದಿವಾಸಿಗಳು ಮತ್ತು ಇತರ ಕೆಳ ಜಾತಿಯವರಾಗಿದ್ದು, ಅವರು ಒಂದು ವೇಳೆ ಜಮೀನು ಹೊಂದಿದ್ದರೆ, ಅದು ಸ್ವಲ್ಪ ಮಾತ್ರ ಇರುತ್ತದೆ. ವಿಭಿನ್ನ ಕಾರ್ಮಿಕ ಮೂಲಗಳನ್ನು ಬಳಸಿಕೊಳ್ಳುವುದರ ಮೂಲಕ ಕಾರ್ಖಾನೆಗಳು ಕಾರ್ಮಿಕರ ಸಾಂಪ್ರದಾಯಿಕ ಮುಖ್ಯ ಮೂಲವಾಗಿದ್ದ ಹಿನ್ನಾಡು ಮಹಾರಾಷ್ಟ್ರದ ಮೇಲಿನ ಅವಲಂಬನೆಯನ್ನು ಕಡಮೆ ಮಾಡಲು ಪ್ರಾರಂಭಿಸಿವೆ.

ಕಾರ್ಮಿಕ ಬಲದ ವಯಸ್ಸಿನ ಸಂಯೋಜನೆ ಕೂಡ ಒಗ್ಗಟ್ಟಾಗಲು ಪ್ರತಿಕೂಲವಾಗಿದೆ. ಕಾರ್ಖಾನೆಗಳು ಗರಿಷ್ಠ ದೈಹಿಕ ಸಾಮರ್ಥ್ಯವಿರುವ ವಯೋಮಾನವನ್ನು, 16 ರಿಂದ 30 ವಯಸ್ಸಿನ ಯುವ ವಯಸ್ಕರನ್ನು ಬಳಸಿಕೊಳ್ಳಲು ಇಷ್ಟಪಡುವುದು ಸ್ವಲ್ಪ ಮಟ್ಟಿಗೆ ಅರ್ಥವಾಗುತ್ತದೆ. ನಾನು ಗಮನಿಸಿದಂತೆ, ಪ್ರತಿ ವರ್ಷ ಇದೇ ಮೊದಲ ಬಾರಿಗೆ ಕಬ್ಬು ಕಟಾವು ಮಾಡಲು ಬರುವವರು ಅಧಿಕ ಪ್ರಮಾಣದಲ್ಲಿರುತ್ತಾರೆ ಮತ್ತು ಹಿರಿಯರಲ್ಲಿ ಕೂಡ ಹೆಚ್ಚಿನವರು 10 ವರ್ಷಕ್ಕಿಂತ ಕಡಮೆ ಅನುಭವ ಇರುವವರೇ ಆಗಿರುತ್ತಾರೆ. ಕೆಲವೇ ಕೆಲವರು ಮಾತ್ರ ಈ ಕಠಿಣ ಪರಿಶ್ರಮದ ಅಲೆಮಾರಿ ಜೀವನಶೈಲಿಯನ್ನು ದೀರ್ಘ ಕಾಲ ಮುಂದುವರಿಸುತ್ತಾರೆ. ಬೇರೆ ರೀತಿಯಲ್ಲಿ ಹೇಳುವುದಾದರೆ, ಆವೃತ್ತವು ಉದ್ಯಮದ ಋತುಮಾನ ಪ್ರವೃತ್ತಿಯನ್ನು ಪ್ರತಿಬಿಂಬಿಸುವುದು ಮಾತ್ರವಲ್ಲದೆ, ಕಾರ್ಮಿಕರ ಸಂಯೋಜನೆಯ ಪ್ರಮುಖ ವೈಶಿಷ್ಟ್ಯವೂ ಕೂಡ. ಇದಕ್ಕೆ ಇರುವ ಸ್ಪಷ್ಟ ವಿವರಣೆಯೆಂದರೆ, ತೀರ ಬಲಿಷ್ಠರು ಮಾತ್ರ ಮತ್ತೆ ಮತ್ತೆ ಇಂಥ ಕಠಿಣ ಶ್ರಮದ ಕೆಲಸವನ್ನು ಒಳಗೊಳ್ಳುವ ಕಾರ್ಯಾಚರಣೆಯನ್ನು ಕೈಗೊಳ್ಳಲು ಸಿದ್ಧರಿರುತ್ತಾರೆ.

ಆದರೆ, ಇಂಥ ತೀರ್ಮಾನವು ಕಬ್ಬು ಕಟಾವುದಾರರಿಗೆ ವಾಸ್ತವದಲ್ಲಿ ಲಭ್ಯವಿರುವುದಕ್ಕಿಂತ ಹೆಚ್ಚು ಆಯ್ಕೆಯ ಸ್ವಾತಂತ್ರ್ಯವಿದೆ ಎಂದು ಭಾವಿಸುತ್ತದೆ. ಪರ್ಯಾಯ ಜೀವನೋಪಾಯ ಮಾರ್ಗಗಳ ಕೊರತೆಯ ಒತ್ತಡದಿಂದ ಅವರು ಪ್ರತಿ ವರ್ಷ ದಕ್ಷಿಣ ಗುಜರಾತಿಗೆ ಪ್ರಯಾಣ ಬೆಳೆಸುತ್ತಾರೆ. ಸಕ್ಕರೆ ಕಾರ್ಖಾನೆಗಳು ಕೆಲವು ಋತುಮಾನಗಳ ಬಳಿಕ ಹೊಸಬರನ್ನು ನೇಮಕ ಮಾಡಿಕೊಳ್ಳಲು ಕಾರ್ಮಿಕರು ಅನುಭವಿಸುವ ದೈಹಿಕ ನಿತ್ರಾಣ ಕಾರಣವಾಗಿದೆ. ದೀರ್ಘ ಅನುಭವ ಇರುವ ಕಬ್ಬು ಕಟಾವುದಾರರು ಪ್ರತಿರೋಧ ತೋರಿಸುವ ಸಾಧ್ಯತೆಯು ಕೆಲಸಕ್ಕೆ ಇನ್ನೂ

ಹೊಂದಿಕೊಳ್ಳದೆ ಇರುವ ಹೊಸದಾಗಿ ಆಗಮಿಸಿದವರಲ್ಲಿ ಇಲ್ಲವಾದುದರಿಂದ, ಕಾರ್ಮಿಕ ಬಲವನ್ನು ನಿಯತವಾಗಿ ಬದಲಿಸುವುದನ್ನು ಉತ್ತೇಜಿಸಲಾಗುತ್ತದೆ. ಶಿಬಿರದಲ್ಲಿ ಪ್ರತ್ಯೇಕೀಕರಣದ ಮೂಲಕ ಕಟಾವುದಾರರ ಗುಂಪುಗಳು ಸ್ಥಳೀಯರೊಂದಿಗೆ ಸಂಪರ್ಕ ಬೆಳೆಸಿಕೊಳ್ಳುವುದನ್ನು ತಡೆದಂತೆ, ಹಳಬರನ್ನು ನಿಯತವಾಗಿ ಹೊಸ ವಲಸಿಗರಿಂದ ಬದಲಿಸುವ ಮೂಲಕ ಕಾರ್ಮಿಕರು ಒಗ್ಗಟ್ಟಾಗುವುದನ್ನು ತಡೆಯಲಾಗುತ್ತದೆ.

ಗ್ರಾಮೀಣ ಗುಜರಾತಿನಲ್ಲಿ ಸಹಕಾರ ಸಂಘಗಳು ಉತ್ಪಾದನೆ ಮಾತ್ರವಲ್ಲದೆ ಉತ್ಪಾದಕತೆಯನ್ನೂ ಸಹ ಹೆಚ್ಚಿಸಲು ಮಾಡುವ ನಿರಂತರ ಪ್ರಯತ್ನವು ಬಂಡವಾಳಶಾಹಿಯ ಪ್ರೇರಕಶಕ್ತಿಗೆ ಮುಖ್ಯ ಕಾರಣವಾಗಿದೆ. ಕಳೆದ 20 ವರ್ಷದಲ್ಲಿ ಬಯಲು ಪ್ರದೇಶದ ಕೃಷಿ ಭೂಮಿಯಲ್ಲಿ ಕಬ್ಬು ಬೆಳೆಯುವಿಕೆ ಪ್ರಮಾಣ ಅಪಾರವಾಗಿ ಹೆಚ್ಚಳಗೊಂಡಿದೆ ಮತ್ತು ಇದೇ ಅವಧಿಯಲ್ಲಿ ಎಕರೆವಾರು ಇಳುವರಿ ಶೇ.25ರಿಂದ 30 ರಷ್ಟು ಹೆಚ್ಚಳಗೊಂಡಿದೆ. ರೈತ-ಉದ್ಯಮಿಗಳು ಸ್ವಾಭಾವಿಕವಾಗಿಯೇ ಕೋಯ್ಲು ಕಾರ್ಯಾಚರಣೆಯಲ್ಲಿನ ಸಂಭಾವ್ಯ ಉತ್ಪಾದಕತೆಯ ಲಾಭದಲ್ಲಿ ಆಸಕ್ತಿ ಹೊಂದಿರುತ್ತಾರೆ. ಪ್ರಸ್ತುತ ಲಭ್ಯವಿರುವ ತಂತ್ರಜ್ಞಾನದಲ್ಲಿ ಕಾರ್ಮಿಕ-ತೀವ್ರತೆಯನ್ನು ಹೆಚ್ಚಿಸುವುದನ್ನು ಕಲ್ಪಿಸಿಕೊಳ್ಳಲು ಆಗದೆಂದು ತೋರುತ್ತದೆ. ಜಗತ್ತಿನ ಅತ್ಯಂತ ಉತ್ತಮ ಸಂಕಲ್ಪದಿಂದಲೂ, ಇಬ್ಬರು ವಯಸ್ಕರು ಆರರಿಂದ ಏಳು ತಿಂಗಳ ಅವಧಿಯಲ್ಲಿ ದಿನವೊಂದಕ್ಕೆ ಅರ್ಧದಿಂದ ಮೂರರಲ್ಲಿ ಎರಡು ಭಾಗ ಟನ್‌ಗಿಂತ ಹೆಚ್ಚು ಕಬ್ಬನ್ನು ಕೈಯಾರೆ ಕತ್ತರಿಸಿ, ಸಾಗಣೆಗೆ ಸಿದ್ಧಪಡಿಸಲಾರರು. ಇನ್ನಷ್ಟು ಕೆಲಸದ ಭಾರ ಹೊರಿಸಿದಲ್ಲಿ ಅವರು ದೈಹಿಕವಾಗಿ ಕುಸಿದುಬೀಳುತ್ತಾರೆ. ಯಾಂತ್ರೀಕರಣವನ್ನು ಇನ್ನೂ ಗಂಭೀರವಾಗಿ ಪರಿಗಣಿಸಿಲ್ಲವಾದರೂ, ಅದನ್ನು ಅಳವಡಿಸಿಕೊಳ್ಳಲು ಕಾರಣಗಳು ಕ್ರಮೇಣ ಹೆಚ್ಚಾಗುತ್ತದೆ ಎಂದು ನಾನು ನಿರೀಕ್ಷಿಸುತ್ತೇನೆ. ಅದರ ಆರಂಭಿಕ ಪ್ರಯೋಗಗಳು ಈಗಾಗಲೇ ನಡೆದಿವೆ. ಯಾಂತ್ರಿಕ ಕಟಾವು ಖಂಡಿತವಾಗಿಯೂ ಅಗ್ಗ ಆಗಲಾರದು. ಹಲವು ವರ್ಷಗಳಿಂದ ಉತ್ಪಾದನೆಯ ಒಟ್ಟು ವೆಚ್ಚದಲ್ಲಿ ಕಟಾವು ಕಾರ್ಮಿಕರ ಪಾಲು ಕೇವಲ ಶೇ.15-20. ಆಡಳಿತ ವರ್ಗ ಕಟಾವುದಾರರಿಗೆ ಉತ್ತಮ ವೇತನ ನೀಡುವುದನ್ನು ಹಾಗೂ ಉತ್ತಮ ವ್ಯವಸ್ಥೆ ಕಲ್ಪಿಸುವುದನ್ನು ತಪ್ಪಿಸಲು ಯಾಂತ್ರೀಕರಣಕ್ಕೆ ನಿರ್ಧರಿಸಬಹುದು. ಪ್ರಸ್ತುತ ಕೃಷಿ-ಉದ್ಯಮದ ಉದ್ಯೋಗದಾತರು ಚಾಲ್ತಿಯಲ್ಲಿರುವ ಕಾರ್ಮಿಕ ಕಾನೂನುಗಳನ್ನು ಅನುಸರಣೆ ಮಾಡಬೇಕೆಂದು ಒತ್ತಾಯಿಸುವ ತಂಟೆಕೋರರನ್ನು ಬೆದರಿಸಲು ಯಾಂತ್ರೀಕರಣದ ಹೆಸರು ಬಳಸುತ್ತಾರೆ. ಕಟಾವಿನ ಯಾಂತ್ರೀಕರಣವು ಬಹುಪಾಲು ವಲಸೆ ಕಾರ್ಮಿಕರನ್ನು ನಿಸ್ಸಂಶಯವಾಗಿ ಅನವಶ್ಯಗೊಳಿಸುತ್ತದೆ. ಪರ್ಯಾಯ ಜೀವನಾಧಾರವಿಲ್ಲದೆ ಅವರು ಘೋರ ಭವಿಷ್ಯವನ್ನು ಎದುರು ನೋಡಬೇಕಾಗುತ್ತದೆ.

## ಸಮೃದ್ಧಿ ಮತ್ತು ದಿವಾಳಿತನ

ಕಬ್ಬಿನ ಬೆಳೆಯನ್ನು ಪರಿಚಯಿಸಿದ್ದರಿಂದ ಈವರೆಗೆ ಮುಖ್ಯವಾಗಿ, ಬಹುಶ: ಅವರಿಗೆ ಮಾತ್ರ, ಲಾಭವಾಗಿರುವುದು ಕೃಷಿಕರಲ್ಲದ ಮಾಲೀಕರ ವರ್ಗಕ್ಕೆ. ದಶಕದ ಹಿಂದೆ ಕಬ್ಬು ಕಟಾವುದಾರರಿಗೆ ನೀಡಲಾಗುತ್ತಿದ್ದ ಅಂದಾಜು ವೇತನವು ಕೃಷಿ ಉದ್ಯೋಗದಾತರು ಕಾನೂನು ಬದ್ಧವಾಗಿ ನೀಡಬೇಕಿದ್ದ ವೇತನದ 2/3ರಷ್ಟು ಇತ್ತು.

ನನ್ನ ಇತ್ತೀಚಿನ ಕ್ಷೇತ್ರಕಾರ್ಯದ ಪ್ರಕಾರ, 1988ರ ವಸಂತ ಋತುವಿನಲ್ಲಿ ಪ್ರಸ್ತುತ ಕನಿಷ್ಠ ವೇತನದ 2/3 ರಷ್ಟು ಮೊತ್ತವನ್ನೇ ನೀಡಲಾಗುತ್ತಿದೆ. ಆದಾಗ್ಯೂ, ಇದರಿಂದ ನಡುವಿನ ವರ್ಷಗಳಲ್ಲಿ ಶೋಷಣೆಯ ಪ್ರಮಾಣ ಬದಲಾಗಿಲ್ಲ ಎಂದು ತೀರ್ಮಾನಿಸುವುದು ಸರಿಯಾಗುವುದಿಲ್ಲ. ರೈತ ಬಂಡವಾಳಶಾಹಿಗಳು ತಮ್ಮ ಕಬ್ಬಿಗೆ ಪಡೆಯುವ ದರವು ಬೆಳೆಯುವ ಮತ್ತು ಸಂಸ್ಕರಿಸುವ ವೆಚ್ಚಕ್ಕಿಂತ ತೀವ್ರವಾಗಿ ಹೆಚ್ಚಳಗೊಂಡಿದೆ. ಉತ್ಪಾದಕರು ಹೆಚ್ಚಿನ ಲಾಭಾಂಶವನ್ನು ಹೊಂದಿದ್ದರೂ, ಕಾರ್ಮಿಕರಿಗೆ ನೀಡುವ ಕಡಮೆ ವೇತನ ಮೊದಲಿನಂತೆಯೇ ಇದೆ. ಉತ್ಪಾದಕರು ಪ್ರಬಲ ಜಾತಿ-ವರ್ಗದ ಸದಸ್ಯರಾಗಿರುವುದರಿಂದ, ನ್ಯಾಯಯುತವಾಗಿ ತಮಗೆ ಸೇರಿದ್ದೆಂದು ಅವರು ಪರಿಗಣಿಸುವ ಹೆಚ್ಚು ಬಂಡವಾಳ, ಕಾರ್ಮಿಕರ ಜೀವನವನ್ನು ನಿರ್ಲಕ್ಷಿಸಿದ್ದರೂ ಅವರ ಶ್ರಮದ ರೂಪದಲ್ಲಿ ಪಡೆದ ಹೆಚ್ಚುವರಿ ಮೌಲ್ಯಕ್ಕಾಗಿ ಅವರು ಆಗ್ರಹಿಸುತ್ತಾರೆ.

ದಕ್ಷಿಣ ಗುಜರಾತಿನ ಸಹಕಾರ ಸಕ್ಕರೆ ಕಾರ್ಖಾನೆಗಳಲ್ಲಿ ಋತುಮಾನ ವಲಸೆಗಾರರನ್ನು ಬಳಸುವುದನ್ನು ಕುರಿತು ನಾನು ಮಾಡಿದ ಮೊದಲ ಸಂಶೋಧನೆಯ ಫಲಿತಾಂಶಗಳನ್ನು "The crushing of cane and of labour (ದ ಕ್ರಷಿಂಗ್ ಆಫ್ ಕೇನ್ ಆಂಡ್ ಆಫ್ ಲೇಬರ್)" ಎನ್ನುವ ಶೀರ್ಷಿಕೆಯಡಿಯಲ್ಲಿ ಪ್ರಕಟಿಸಿದೆ (ಬ್ರೆಮನ್, 1978). ನನ್ನ ಹೊಸ ಶೋಧದ ಪ್ರಕಾರ, ಈ ಸಂಯೋಗವು ಪ್ರಾಂತ್ಯದಲ್ಲಿ ಇಂದಿಗೂ ಕೃಷಿ-ಉದ್ಯಮದ ಯಶಸ್ಸಿನೊಂದಿಗೆ ತಳಕು ಹಾಕಿಕೊಂಡಿದೆ. ಮುಂದುವರಿಯುತ್ತಿರುವ ಮತ್ತು ಇನ್ನೂ ಹೆಚ್ಚುತ್ತಿರುವ ಸಾಮಾಜಿಕ ಧ್ರುವೀಕರಣವು "ಆರ್ಥಿಕ ಅಭಿವೃದ್ಧಿಯ ಮೊದಲ ಹಂತದಲ್ಲಿ ಬಂಡವಾಳ ಇರುವವರು ಅಥವಾ ಬಂಡವಾಳಕ್ಕೆ ಪ್ರವೇಶಾವಕಾಶ ಇರುವವರಿಗೆ ಲಾಭವಾಗುತ್ತದೆ, ಬಳಿಕ ಇಲ್ಲದವರಿಗೆ (in a trickle down way (ಸ್ವಲ್ಪ ಸ್ವಲ್ಪವಾಗಿ ತೊಟ್ಟಿಕ್ಕಿ ಬೀಳುವ ರೀತಿಯಲ್ಲಿ) ಲಾಭವಾಗುತ್ತದೆ" ಎನ್ನುವ ಅಭಿವೃದ್ಧಿ ತಜ್ಞರು ಮತ್ತು ಕಾರ್ಯನೀತಿ ನಿರೂಪಕರು ಪೋಷಿಸುವ ಆಲೋಚನೆಯನ್ನು ವಿರೋಧಿಸುತ್ತದೆ. ನಾನು ಮೇಲೆ ಉಲ್ಲೇಖಿಸಿದ ಪರಿಸ್ಥಿತಿಯು ದಕ್ಷಿಣ ಗುಜರಾತಿಗೆ ಅಸದೃಶವಾದುದಲ್ಲ: ತಮ್ಮ ಕಾರ್ಮಿಕ ಬಲ ಹೊರತುಪಡಿಸಿ ಬೇರೇನೂ ಸ್ವಂತ ಸರಕು ಇಲ್ಲದವರಿಗೆ ತೊಟ್ಟಿಕ್ಕಿ ಬೀಳುವ ಪರಿಣಾಮದ (trickle-down effect) ಯಾವುದೇ ಸೂಚನೆ ನನಗೆ ಕಾಣಿಸಲಿಲ್ಲ (Bardhan (ಬರ್ಧನ್), 1984: 188-199 ಇದನ್ನೂ ನೋಡಿ).

ಸರ್ಕಾರ ತನ್ನ ಅಭಿವೃದ್ಧಿ ಯೋಜನೆಗಳಿಗೆ ಸಹಮತತೆಯನ್ನು ಪಡೆಯುವ ಈ ಸಾಮಾಜಿಕ ಸಮಾನತೆಯ ಮಾದರಿಯ ಮುಖವಾಡದ ಹಿಂದೆ ಬಡವರು ಮತ್ತು ಶ್ರೀಮಂತರು, ಶಕ್ತರು ಮತ್ತು ಬಲಹೀನರ ನಡುವಿನ ತೀವ್ರ ಅಸಮಾನತೆಯನ್ನು ಬಗೆಹರಿಸಲು ಹಾಗೂ ಬದಲಾವಣೆಗಳನ್ನು ತರಲು ಮನಸ್ಸಿಲ್ಲದಿರುವುದನ್ನು ಕಾಣಬಹುದು. ಇದರ ಪರಿಣಾಮವೆಂದರೆ, ದಾಸ್ಯಕ್ಕೆ ಸಿಲುಕಿದ ವರ್ಗಗಳ ಪರವಾಗಿ ಮಾತನ್ನಾಡುವುವರನ್ನು ವಿಧ್ವಂಸಕ ಚಟುವಟಿಕಗಳಲ್ಲಿ ತೊಡಗಿಸಿಕೊಂಡ ತಪ್ಪಿತಸ್ಥರು ಎಂಬ ಹಣೆಪಟ್ಟಿ ಹಚ್ಚಲಾಗುತ್ತದೆ. ತಮ್ಮ ಧ್ವನಿ ಕೇಳುವಂತೆ ಮಾಡಲಾಗದ ಬಡತನ ಪೀಡಿತರ ಹಿತಾಸಕ್ತಿಗಳನ್ನು ಪ್ರತಿನಿಧಿಸುವುದನ್ನು ಹೊರತುಪಡಿಸಿ ಅವರಿಗೆ ಬೇರೆ ಉದ್ದೇಶ ಇಲ್ಲದಿದ್ದರೂ ಮತ್ತು ಅದನ್ನು ಕಾನೂನಿಕ ಚೌಕಟ್ಟಿನಲ್ಲೇ ಮಾಡಲು ಪ್ರಯತ್ನಿಸುತ್ತಿದ್ದರೂ, ಅಧಿಕಾರ ವರ್ಗ ಅಂಥ

ಹಸ್ತಕ್ಷೇಪವನ್ನು ಅನುಮತಿಸಲಾಗದ ಚಳವಳಿಗಳೆಂದು ಹಾಗೂ ಸರಿಯಾದ ಕಾನೂನು ಮತ್ತು ಸುವ್ಯವಸ್ಥೆಯಲ್ಲಿ ಅನ್ಯಾಯಯುತ ಹಸ್ತಕ್ಷೇಪ ಎಂದು ಪರಿಗಣಿಸುತ್ತದೆ. ಉದ್ಯೋಗದಾತರು ವರ್ಗವೈರುಧ್ಯದ ಯಾವುದೇ ಉಲ್ಲೇಖಕ್ಕೆ ವಿರೋಧ ವ್ಯಕ್ತಪಡಿಸುತ್ತಾರೆ; ಆದರೆ ವಿರೋಧಾಭಾಸವೆಂದರೆ, ಸಮತೋಲನವನ್ನು ಸಾಧಿಸುವಂಥ ಪ್ರಯತ್ನಗಳು ಕಾರ್ಮಿಕ ಸಂಬಂಧಗಳನ್ನು ಖಂಡಿತವಾಗಿಯೂ ನಿಯಂತ್ರಿಸಬೇಕು ಎಂದು ಆಗ್ರಹಿಸುತ್ತಾರೆ. ಅವರ ದೃಷ್ಟಿಕೋನದ ಪ್ರಕಾರ, ವಿರೋಧಿಸುವ ಆಸಕ್ತಿಗಳಿಗೆ ಜಾಗವಿಲ್ಲ; ಒಂದು ವೇಳೆ ಸಂಘರ್ಷಗಳು ಅನಿರೀಕ್ಷಿತವಾಗಿ ಎದುರಾದರೆ, ಉದ್ಯೋಗದಾತರು ಮತ್ತು ಕಾರ್ಮಿಕರ ಸಂಧಾನದಿಂದ ಅಂತ್ಯಗೊಳಿಸಬೇಕೆಂದು ಭಾವಿಸುತ್ತಾರೆ.

ಆದಾಗ್ಯೂ, ರಾಜಿ ಸಂಧಾನದ ಯಾವುದೇ ಪ್ರಯತ್ನಗಳಲ್ಲಿ ಕಾರ್ಮಿಕ ಸಂಘಟನೆಗಾರರು, ರಾಜಕಾರಣಿಗಳು ಹಾಗೂ ಇನ್ನಿತರ "ಕಾರ್ಯಕರ್ತ"ರಂತಹ ಹೊರಗಿನವರು ಯಾವುದೇ ಪಾತ್ರ ವಹಿಸುವುದನ್ನು ಒಪ್ಪಿಕೊಳ್ಳಲಾಗುವುದಿಲ್ಲ. ತಮ್ಮನ್ನು ಭೂಮಿ ಪುತ್ರರೆಂದು ಘೋಷಿಸಿಕೊಳ್ಳುವವರು ಹಾಗೂ ನೂತನ ಕೃಷಿಕವಾದ (New Agrariansim)ದ ನೇತಾರರು ತಮ್ಮ ಅಧಿನಾಯಕತ್ವದಲ್ಲಿ ಯಾವುದೇ ಹಸ್ತಕ್ಷೇಪವನ್ನು ಸಹಿಸುವುದಿಲ್ಲ (ರೂಡಾಲ್ಫ್ ಮತ್ತು ರೂಡಾಲ್ಫ್, 1987:354-364). ಸರ್ಕಾರದ ಕಾರ್ಯಭಾರಗಳು ಎಚ್ಚರಿಕೆಯಿಂದ ಹಾಗೂ ಹಿಂಜರಿಕೆಯಿಂದಲೇ ಈ ಸಾಮಾಜಿಕ ಕ್ಷೇತ್ರಕ್ಕೆ ನಿಷ್ಪಕ್ಷಪಾತ ಮಧ್ಯಸ್ತಿಕೆದಾರನಂತೆ ಪ್ರವೇಶಿಸಲು ಮಾಡುವ ಎಲ್ಲಾ ಪ್ರಯತ್ನಗಳನ್ನು ಅವರು ಉಗ್ರವಾಗಿ ವಿರೋಧಿಸುತ್ತಾರೆ.

ಪಟಿದಾರರಿಗೆ ಈ ಸಬಾಲ್ಟರ್ನ್ (ಕೆಳಮಟ್ಟದ) ವರ್ಗಗಳಾದ ಭೂರಹಿತರ ದುರದೃಷ್ಟದ ಕುರಿತು ತೋರಿಸುವ ಸಂಪೂರ್ಣ ಹಗೆತನವನ್ನು ತಾತ್ಸಾರವೆಂದು ಹೇಳುವುದು ಮೃದುವಾದ ವಿವರಣೆ. ತಮ್ಮ ಮುಖಂಡರು ಇನ್ನಷ್ಟು ಧ್ರುವೀಕರಣಕ್ಕೆ ಕಾರಣವಾಗುವ ಸಂಘರ್ಷದ ಮಾರ್ಗವನ್ನೇ ಹಿಡಿಯಬೇಕು ಎಂದವರು ನಿರೀಕ್ಷಿಸುತ್ತಾರೆ ಮತ್ತು ಕೆಲವು ವರ್ಷಗಳ ಹಿಂದೆ ಗುಜರಾತ್ ನ ಪ್ರಮುಖ ರೈತರ ಸಂಘಟನೆಯೊಂದು ಕಾರ್ಮಿಕರಿಗೆ ಕೊಡುತ್ತಿದ್ದ ಕನಿಷ್ಠ ವೇತನವು ಜೀವನಾಧಾರಕ್ಕೆ ಈಗಾಗಲೇ ಸಾಲದೆ ಇದ್ದರೂ ಅದನ್ನು ತೆಗೆದು ಹಾಕಬೇಕು ಎಂದು ಒತ್ತಾಯಿಸಿದಾಗ, ಎಲ್ಲರೂ ಅದಕ್ಕೆ ಸಮ್ಮತಿಸಿದ್ದರು. ಗ್ರಾಮೀಣ ಪ್ರದೇಶದಲ್ಲಿ ಪ್ರಬಲ ಜಾತಿಗಳ ಸದಸ್ಯರು ವ್ಯಕ್ತಪಡಿಸುವ ಆಲೋಚನೆಗಳಲ್ಲಿ ಸಾಮಾಜಿಕ ಡಾರ್ವಿನಿಸಂನ (Social Darwinism - ಎಂದರೆ "ಅತ್ಯುತ್ತಮವಾದವರ ಉಳಿವು" ಎನ್ನುವ ಸಿದ್ಧಾಂತವನ್ನು ಆಧರಿಸಿದ್ದು ಸಮಾಜದಲ್ಲಿ ಕೆಲವರು ಸಹಜವಾಗಿ ಉತ್ತಮವಾಗಿರುವುದರಿಂದ ಶಕ್ತಿಶಾಲಿಯಾಗುತ್ತಾರೆ ಎನ್ನುವುದನ್ನು ಪ್ರತಿಪಾದಿಸುತ್ತದೆ. ವ್ಯಕ್ತಿಗಳು, ಗುಂಪುಗಳು ಮತ್ತು ಜನರು ಸಸ್ಯಗಳು ಮತ್ತು ಪ್ರಾಣಿಗಳಂತೆಯೇ ನೈಸರ್ಗಿಕ ಆಯ್ಕೆಯ ಡಾರ್ವಿನಿಯನ್ ನಿಯಮಗಳಿಗೆ ಒಳಪಟ್ಟಿರುತ್ತಾರೆ ಎಂಬ ಈ ಸಿದ್ಧಾಂತವನ್ನು ವಿವಿಧ ಕಾಲಘಟದಲ್ಲಿ ಸಾಮ್ರಾಜ್ಯಶಾಹಿ, ವರ್ಣಭೇದ ನೀತಿ, ಸುಜನನಶಾಸ್ತ್ರ, (eugenics) ಮತ್ತು ಸಾಮಾಜಿಕ ಅಸಮಾನತೆಯನ್ನು ಸಮರ್ಥಿಸಲು ಬಳಸಲಾಗಿದೆ.) ಪ್ರಭಾವವು ಕಂಡುಬರುತ್ತದೆ. ಬಡತನ ಸಮಸ್ಯೆಯಲ್ಲ, ಬದಲಾಗಿ ಅಪಾರ ಪ್ರಮಾಣದ ಬಡವರ್ಗಗಳು ಹೀನಾಯ ಪರಿಸ್ಥಿತಿಯಲ್ಲಿ ಇರಲು ಅವುಗಳ ಲೋಪದೋಷಗಳೇ

ಕಾರಣ ಎನ್ನುವುದು ಅವರ ಮಾತಿನ ತಾತ್ಪರ್ಯ. ಅವರ ಪ್ರಕಾರ, ಈ ಭಾರಿ ಹೊರೆಯಾಗಿರುವ ಇವರನ್ನು ತೊಡೆದುಹಾಕಿದರೆ, ಸಮಾಜಕ್ಕೆ ಲಾಭವಾಗುತ್ತದೆ. 1970ರ ಆರಂಭದಲ್ಲಿದ್ದ ಘೋಷಣೆ 'ಗರೀಬಿ ಹಟಾವೋ' ಈಗ ಮರೆತುಹೋಗಿದ್ದು, ಅದರ ಬದಲಾಗಿ ಆಸ್ತಿಯನ್ನು ಹೊಂದಿರದವರನ್ನು ತೊಡೆದುಹಾಕಬೇಕು ಎಂದು ಹೊಂದಿರುವವರು ಅನೇಕ ವೇಳೆ ವ್ಯಕ್ತಪಡಿಸುವ ಭಾವನೆಗಳಿಂದ ಬದಲಾಯಿಸಲ್ಪಟ್ಟಿದೆ ಎಂದು ತೋರುತ್ತದೆ.

ಬಡವರಿಗೆ ಸಾಲುವಷ್ಟು ವೇತನದ ಹಕ್ಕನ್ನು ನಿರಾಕರಿಸುವ ಸಿದ್ಧಾಂತವು ಅಂಥ ಜನರಿಗೆ ಮತದಾನದ ಹಕ್ಕನ್ನು ಕೊಟ್ಟಿದ್ದು ತಪ್ಪು ಎನ್ನುವ ಅಭಿಪ್ರಾಯವನ್ನು ಸುಲಭವಾಗಿ ಸಮ್ಮತಿಸುತ್ತದೆ. ಇಂಥ ರೀತಿಯ ಆಲೋಚನೆಯು ಜನಸಂಖ್ಯಾ ನೀತಿಯ ಮೇಲೆ ಪರಿಣಾಮ ಬೀರಿದೆ. ಪ್ರಸ್ತುತ ಸಿದ್ಧಾಂತದ ಪ್ರಕಾರ, ತೀವ್ರ ಜನಸಂಖ್ಯಾ ನಿಯಂತ್ರಣಕ್ಕೆ ಸರ್ಕಾರ ಬೆಂಬಲಿತ ಕಾರ್ಯಕ್ರಮಗಳು ಬೇಕು ಎಂದು ಮಿರ್ಡಾಲ್ ಮನವಿ ಮಾಡಿದಾಗ ಅವರ ಮನಸ್ಸಿನಲ್ಲಿ ಇದ್ದ ಮುಕ್ತ ಆಯ್ಕೆಯ ಪ್ರಯೋಗವು ಒಂದು ಜನಸಂಖ್ಯಾ ನೀತಿಯನ್ನು ರೂಪಿಸಲು ಸೂಕ್ತ ಮಾರ್ಗದರ್ಶಿ ತತ್ತ್ವವಾಗಿರಲು ಸಾಧ್ಯವಿಲ್ಲ. ಬಡತನದಲ್ಲಿ ಜೀವಿಸುವವರ ಜನಸಂಖ್ಯಾ ವರ್ತನೆಯನ್ನು ನಿರ್ಬಂಧಿಸುವ ಅಗತ್ಯ ಖಂಡಿತವಾಗಿಯೂ ಇದೆ. ಆದರೆ, ಈ ಕೆಳವರ್ಗಗಳು ಸ್ವಯಂ ಪ್ರೇರಿತ ಕ್ರಮಗಳನ್ನು ಕೈಗೊಳ್ಳಲು ಪೂರ್ವಷರತ್ತಾದ ಜವಾಬ್ದಾರಿಯ ಮನಃಸ್ಥಿತಿಯನ್ನು ಹೊಂದಿಲ್ಲ ಎಂದು ಪರಿಗಣಿಸಲಾಗಿದೆ. ಅವರ ಅಸಮ ಪ್ರಮಾಣದ ಬೆಳವಣಿಗೆ ಮೇಲೆ ನಿರ್ಬಂಧ ಹೇರುವುದು ನಿಷ್ಪ್ರಯೋಜಕ ಮತ್ತು ಅಪರಾಧ ಮನೋವೃತ್ತಿಯ ಅಧಿಕವನ್ನು ನೋಟದಿಂದಲೇ ಮರೆ ಮಾಡಬೇಕು ಇಲ್ಲವೇ ಸಮಾಜದಿಂದಲೇ ಸಂಪೂರ್ಣವಾಗಿ ತೊಡೆದುಹಾಕಬೇಕು ಎನ್ನುವ ಶ್ರೀಮಂತರು ಹೇಳುವ ಅಭಿಪ್ರಾಯಕ್ಕೆ ಅನುಸಾರವಾಗಿದೆ. ನಾನು ಕ್ಷೇತ್ರಕಾರ್ಯದ ವೇಳೆ ಆಗಾಗ ಮುಖಾಮುಖಿಯಾಗುತ್ತಿದ್ದ ಇಂಥ ಸಾಮಾಜಿಕ ಡಾರ್ವಿನಿಸಂನ ಧೋರಣೆಗಳು, 1970ರ ಮಧ್ಯಭಾಗದಲ್ಲಿ ತುರ್ತು ಪರಿಸ್ಥಿತಿ ವೇಳೆ ಬಲವಂತದ ಸಂತಾನಹರಣ ಶಸ್ತ್ರಚಿಕಿತ್ಸೆ ಕಾರ್ಯಕ್ರಮಕ್ಕೆ ಗ್ರಾಮೀಣ ಉನ್ನತ ವರ್ಗದ ಮಂದಿ ಏಕೆ ತಮ್ಮ ಸಂಪೂರ್ಣ ಬೆಂಬಲ ನೀಡಿದರು ಎನ್ನುವುದನ್ನು ಅರ್ಥಮಾಡಿಕೊಳ್ಳಲು ಸಹಾಯವಾಗುತ್ತದೆ. ಅಧಿಕಾರಶಾಹಿಯ ಮೇಲ್ಸ್ತರದ ಅಧಿಕಾರಿಗಳು ವಿಧಿಸಿದ್ದ ಶಸ್ತ್ರಚಿಕಿತ್ಸೆಗಳ ಗುರಿಯನ್ನು ತಲುಪಲು ಸ್ಥಳೀಯ ಅಧಿಕಾರಿಗಳು ತಮ್ಮ ಪ್ರಯತ್ನಗಳನ್ನು ಕೃಷಿ ಕಾರ್ಮಿಕರು ಹಾಗೂ ಇನ್ನಿತರ ದುರ್ಬಲ ಗುಂಪಿನವರ ಮೇಲೆ ಕೇಂದ್ರೀಕರಿಸಿದರೇ ಹೊರತು ಭೂಮಾಲೀಕರ ಮೇಲೆ ಅಲ್ಲ.

ದಕ್ಷಿಣ ಗುಜರಾತ್ ನ ಗ್ರಾಮಾಂತರ ಪ್ರದೇಶದಲ್ಲಿನ ಹೊಸ ಉತ್ಪಾದನಾ ಮಾದರಿಯು ಸಾಮಾಜಿಕ ಸಂಬಂಧಗಳನ್ನು ಕಠಿಣವಾಗಿಸಿದೆ. ಶ್ರೀಮಂತ ರೈತರು ಸಮಾಜದ ಕೆಳಸ್ತರದ ಜನ ದಾಸ್ಯವಿಮೋಚನೆಗೆ ಎತ್ತುವ ಗಟ್ಟಿ ದನಿಯನ್ನು ತಟಸ್ಥಗೊಳಿಸಲು ದೈಹಿಕ ಬಲವನ್ನು ಬಳಸಲೂ ಹಿಂಜರಿಯುವುದಿಲ್ಲ. ಇಂಥ ಪ್ರತಿಕ್ರಿಯೆಗಳು ಭೂರಹಿತ ಹಲ್ಪತಿಗಳು ದೀರ್ಘ ಕಾಲದಿಂದ ಅನುಭವಿಸುತ್ತಿರುವ ಕಹಿ ಭಾವನೆಗೆ ಹೊಸ ಇಂಧನವನ್ನು ಒದಗಿಸುತ್ತದೆ (ಉರಿವ ಬೆಂಕಿಗೆ ತುಪ್ಪ ಸೇರಿಸಿದಂತೆ). ಇದರಿಂದ ಬಿಕ್ಕಟ್ಟು ಹೆಚ್ಚುತ್ತಿದ್ದು, ವರ್ಗ ಸಂಘರ್ಷದ ರೂಪ ಪಡೆದುಕೊಳ್ಳುತ್ತಿದೆ. ಈ ಪ್ರಕ್ರಿಯೆಯನ್ನು ಗ್ರಾಮೀಣ ಭಾರತದ ಇನ್ನಿತರ ಭಾಗದಲ್ಲೂ ನೋಡಬಹುದಾಗಿದೆ.

ಹೊಸದಾಗಿ ಸ್ಥಾಪಿತವಾದ ವ್ಯವಸ್ಥೆಗೆ ಸಾಮಾಜಿಕ ಸಹಮತತೆಯ ಕೊರತೆಯು ಇದ್ದು ಆ ಕಾರಣ ರಾಜಕೀಯ ಸ್ಥಿರತೆಯ ಕೊರತೆಯನ್ನು ಸಹ ಹೊಂದದಿರಬಹುದು.

ಸರ್ಕಾರವೆನ್ನುವುದು ಆಳುವ ವರ್ಗದವರ ಕೈಯಲ್ಲಿರುವ ಒಂದು ಸಾಧನ ಎಂದು ಸ್ಥಾಪಿಸುವುದು ತೀರ ಸರಳೀಕೃತವಾಗಿರುತ್ತದೆ. ಆದರೆ, ಅಭಿವೃದ್ಧಿ ಕಾರ್ಯನೀತಿಗಳು ಬಂಡವಾಳದ ಮಾಲೀಕತ್ವದ ಮೇಲೆ ಹೆಚ್ಚಿನ ಮೌಲ್ಯವನ್ನು ಇರಿಸುತ್ತವೆ ಎನ್ನುವುದನ್ನು ನಿರಾಕರಿಸಲು ಸಾಧ್ಯವಿಲ್ಲ (ಬರ್ಧನ್, 1984a: 32-39). ರಾಜ್ಯವನ್ನು 'ಮೂರನೇ ಆಟಗಾರ' (ರೂಡಾಲ್ಫ್ ಮತ್ತು ರೂಡಾಲ್ಫ್, 1987: 392-401) ಎಂದು ಮಂಡಿಸುವುದು ಅದರ ಬಡವರ ವಿರೋಧಿ ಪಕ್ಷಪಾತವನ್ನು ಕಡೆಗಣಿಸುವುದಕ್ಕೆ ಸಮ. ಸಮಾನತೆಯೊಂದಿಗೆ ಪ್ರಗತಿ, ಮೂಲಭೂತ ಮಾನವ ಅಗತ್ಯಗಳು, ಉದ್ಯೋಗ ಖಾತ್ರಿ ಯೋಜನೆಗಳು, ಸಕಾರಾತ್ಮಕ ತಾರತಮ್ಯಗಳು ಇತ್ಯಾದಿಯಾಗಿ ಅಭಿವ್ಯಕ್ತಗೊಳ್ಳುವ ಗುಂಪು ಉದ್ದೇಶಿತ (target group) ಮಾರ್ಗವೆಂದು ಕರೆಯಲ್ಪಡುವುದನ್ನು ಅನಿಷ್ಟಸೂಚಕಗಳು ಎಂದಾಗಿಯೂ ಸಹ ನೋಡಬಹುದು. ಭೂರಹಿತರು ಒಗ್ಗಟ್ಟಾಗಿ ತಮ್ಮದೇ ಸಂಘಟನೆಗಳನ್ನು ಕಟ್ಟುವುದನ್ನು ತಡೆಯಲು ಸರ್ಕಾರದ ಕಾರ್ಯಭಾರಗಳು ಒಡ್ಡುವ ಅಡೆತಡೆಗಳಿಂದಾಗಿ ವರ್ಗಗಳ ನಡುವಿನ ಪ್ರಬಲ ಅಸಮಾನತೆಯನ್ನು ಕಡಮೆಗೊಳಿಸಲು ಇರಬೇಕಾದ ಪೂರ್ವಭಾವಿ ಷರತ್ತಾದ ಸಮತೂಗುವ ಶಕ್ತಿಯೊಂದು ಹೊರಹೊಮ್ಮುವುದನ್ನು ತಡೆಯಲಾಗಿದೆ. ಕೆಳವರ್ಗಗಳ ದೃಷ್ಟಿಯಲ್ಲಿ ಪ್ರಭುತ್ವವು ದುರ್ಬಲವಲ್ಲ, ಬದಲಿಗೆ ಅತ್ಯಂತ ಶಕ್ತಿಯುತವಾಗಿದೆ.

ಮಿರ್ದಾಲ್ ಹೇಳಿದ ಸಾಮಾಜಿಕ ಜಡತೆ ಎನ್ನುವುದು ಏಂದಾದರೂ ಅಸ್ತಿತ್ವದಲ್ಲಿದ್ದರೆ, ಅದು ನಿಶ್ಚಿತವಾಗಿಯೂ ಭೂತಕಾಲದಲ್ಲಿ ನಡೆದ ಒಂದು ವಿದ್ಯಮಾನ. ಅದೇನೇ ಇದ್ದರೂ, ಗ್ರಾಮೀಣ ಪ್ರದೇಶದಲ್ಲಿ ಈ ಮೊದಲಿಗಿಂತ ಹೆಚ್ಚು ಜನರು ಬಡತನದಲ್ಲಿ ಜೀವಿಸುತ್ತಿದ್ದಾರೆ. ಅನಾವಶ್ಯಕ ಎಂದು ಘೋಷಿಸಲ್ಪಟ್ಟ ಈ ವರ್ಗದ ಜನರನ್ನು ಅಸ್ಪೃಶ್ಯರ ಹೊಸ ವರ್ಗ ಎಂದು ಕರೆಯಬಹುದು: ಆರ್ಥಿಕ ವಹಿವಾಟಿನಲ್ಲಿ ಅಸ್ಥಿರವಾಗಿರುವ, ಗ್ರಾಮೀಣ ಸಮಾಜದಲ್ಲಿ ಬದಿಗೊತ್ತಲ್ಪಟ್ಟ ಅಥವಾ ಗ್ರಾಮೀಣ ಆರ್ಥಿಕತೆಯಿಂದ ಹೊರದೂಡಲ್ಪಟ್ಟ ಹಾಗೂ ಸಂಪೂರ್ಣ ನಾಗರಿಕರು ಎಂದು ಪರಿಗಣಿಸಲ್ಪಡುವವರು ಪಡೆದುಕೊಳ್ಳಬಹುದಾದ ಜನಕಲ್ಯಾಣ ಸೇವೆಗಳು ಮತ್ತು ಸರ್ಕಾರದ ಸೌಲಭ್ಯಗಳಿಂದ ವಂಚಿತರಾದ ಜನರಾಗಿರುತ್ತಾರೆ. ಬೆದರಿಕೆ ಹಾಗೂ ಭಯ ಹುಟ್ಟಿಸುವಿಕೆ ವಿರುದ್ಧ ರಕ್ಷಣೆ ನೀಡುವ ಬದಲು, ಕಾನೂನು ಮತ್ತು ಸುವ್ಯವಸ್ಥೆಯನ್ನು ಎತ್ತಿ ಹಿಡಿಯುವವರಿಂದ ಶಿಕ್ಷೆಗೆ ಒಳಪಡಬಾರದು ಎಂದಾದರೆ, ಅವರು ತಮ್ಮನ್ನು ಅಗೋಚರಗೊಳಿಸಿಕೊಳ್ಳಬೇಕಾಗಿದೆ. ಅವರು ಪ್ರತಿನಿಧಿಸುವ ಪ್ರಮಾಣಾತ್ಮಕ ಆಧಿಕ್ಯವು ಸಾಮಾಜಿಕ ಸಮಸ್ಯೆಯೇ ಹೊರತು ಜನಸಂಖ್ಯೆಯ ಸಮಸ್ಯೆಯಲ್ಲ.

**ಅನುವಾದ: ಮಾಧವ್ ಐಥಾಳ್**

**ಪರಿಶೀಲನೆ: ಈಶ್ವರಚಂದ್ರ**

********

## ಟಿಪ್ಪಣಿ

ಕ್ಷೇತ್ರಕಾರ್ಯವನ್ನು ಆಧರಿಸಿದ ಈ ಲೇಖನವನ್ನು ಇಂಡೋ ಡಚ್ ಪ್ರೋಗ್ರಾಂ ಆನ್ ಆಲ್ಟರ್ನೇಟಿವ್ಸ್ ಇನ್ ಡೆವೆಲಪ್‌ಮೆಂಟ್ (Indo-Dutch Programme on Alternatives in Development) ಪ್ರಾಯೋಜಿಸಿದೆ. ಇಂಗ್ಲಿಷ್ ಅನುವಾದವನ್ನು ಸಿದ್ಧಪಡಿಸಲು ನೆರವಾದ ಜೀನ್ ಸ್ಯಾಂಡರ್ಸ್ (Jean Sanders) ಗೆ ಲೇಖಕ ಕೃತಜ್ಞನಾಗಿದ್ದಾನೆ.

**References**


Bardhan, Pranab K.1984. "Poverty of agricultural labourers and 'trickle-down' in rural India," in *Land, Labor and Rural Poverty: Essays in Development Economics.* Delhi: Oxford University Press.

______. 1984a. *The Political Economy of Development in India*. London/Delhi: Basil Blackwell/ Oxford University Press.

Breman, Jan. 1974. *Patronage and Exploitation: Changing Agrarian Relations in South Gujarat, India.* Berkeley/Delhi: University of California Press/Manohar.

______. 1978. "Seasonal migration and co-operative capitalism: Crushing of cane and of labour by sugar factories of Bardoli," *Economic and Political Weekly* 13:1317-1360.

______. 1985. "I am the Government Labour Officer …. : State protection for rural proletariat of South Gujarat," *Economic and Political Weekly* 20:1043-1055.

______. 1985a. *Of Peasants, Migrants and Paupers: Rural Labour Circulation and Capitalist Production in West India*. Delhi/Oxford: Oxford University Press/ Clarendon.

Byres, Terence J. 1988. "Charan Singh (1902-87): An assessment," *The Journal of Peasant Studies* 15:139-189.

Chakravarty, Sukhamoy.1987. *Development Planning: The Indian Experience.* London/Delhi: Oxford University Press.

Lipton Michael. 1977. *Why Poor People Stay Poor: A Study of Urban Bias in World Development*. London/New Delhi: Temple Smith/ Heritage Publishers.

Myrdal, Gunnar. 1968. *Asian Drama: An Enquiry into the Poverty of Nations*. 3 vols. New York: The Twentieth Century Fund.

Patnaik, Utsa. 1986. *The Agrarian Question and the Development of Capitalism in India: First Daniel Thorner Memorial Lecture*. Delhi: Oxford University Press.

Rudolph, Lloyd I., and Susanne Hoeber Rudolph. 1987. *In Pursuit of Lakshmi: The Political Economy of the Indian State*. Chicago/Bombay: University of Chicago Press/ Oriental Longman.

Scott, James C. 1985. *Weapons of the Weak: Everyday Forms of Peasant Resistance*. New Haven/ London: Yale University Press.

Singh, Charan. 1986. *Land Reforms in UP and the Kulaks*. Delhi: Vikas Publishing House.

Wertheim, Willem F. 1964. "Betting on the strong?," in his *East-West Parallels*. The Hague: Van Hoeve, pp.259-277.

Source: *Population and Development Review*, Vol. 15, No., Supplement: Rural Development and Population: Institutions and Policy (1989), pp. 301-323